॥ ಶ್ರೀ: ॥
॥ ಶ್ರೀ ಗುರುಭ್ಯೋ ನಮ: ॥
॥ ಶ್ರೀ ಪರಮ ಗುರುಭ್ಯೋ ನಮ: ॥
॥ ಶ್ರೀ ಜಗನ್ನಾಥ ದಾಸ ಗುರುಭ್ಯೋ ನಮ: ॥
॥ ಶ್ರೀ ಪುರಂದರ ದಾಸ ಗುರುಭ್ಯೋ ನಮ: ॥
॥ ಶ್ರೀ ವ್ಯಾಸರಾಯ ಗುರುಭ್ಯೋ ನಮ: ॥
॥ ಲಾತವ್ಯ ಚಕ್ರವರ್ತಿ ಭಾವಿ ಸಮೀರ ಶ್ರೀ ವಾದಿರಾಜ ಗುರುಭ್ಯೋ ನಮ: ॥
॥ ಶ್ರೀಮದಾನಂದ ತೀರ್ಥ ಗುರುಭ್ಯೋ ನಮ: ॥
॥ ಶ್ರೀ ವೇದವ್ಯಾಸಾಯ ನಮ: ॥
॥ ಅರಿಷ್ಟ ನಿರಸನಾತ್ಮಕ ಶ್ರೀ ಲಕ್ಷ್ಮೀ ನೃಸಿಂಹಾಯ ನಮ: ॥
॥ ಇಷ್ಟ ಪ್ರದಾಯಕ ಶ್ರೀ ಲಕ್ಷ್ಮೀ ವೇಂಕಟೇಶಾಯ ನಮ: ॥

ಶ್ರೀ ಜಗನ್ನಾಥ ದಾಸವರ್ಯ ವಿರಚಿತ

# ಶ್ರೀ ಹರಿಕಥಾಮೃತಸಾರ

(ಕನ್ನಡ ಲಿಪಿ)

॥ ಶ್ರೀ: ॥

## ॥ ಮಂಗಳಾಚರಣ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀರಮಣಿ ಕರ–ಕಮಲ ಪೂಜಿತ ಚಾರು–ಚರಣ ಸರೋಜ,
ಬ್ರಹ್ಮ–ಸಮೀರ–ವಾಣಿ–ಫಣೀಂದ್ರ–ವೀಂದ್ರ–ಭವ–ಇಂದ್ರ ಮುಖ ವಿನುತ,
ನೀರಜಭವ–ಅಂಡ ಉದಯ ಸ್ಥಿತಿ ಕಾರಣನೆ, ಕೈವಲ್ಯ ದಾಯಕ,
ನಾರಸಿಂಹನೆ ನಮಿಪೆ, ಕರುಣಿಪುದು ಎಮಗೆ ಮಂಗಳವ ॥ ೧ ॥

ಜಗದ–ಉದರನ ಅತಿ–ವಿಮಲ ಗುಣ–ರೂಪಗಳನು, ಆಲೋಚನದಿ,
ಭಾರತ ನಿಗಮ–ತತಿಗಳ ಅತಿಕ್ರಮಿಸಿ, ಕ್ರಿಯಾ–ವಿಶೇಷಗಳ,
ಬಗೆ ಬಗೆಯ ನೂತನವ ಕಾಣುತ, ಮಿಗೆ ಹರುಷದಿಂ ಪೊಗಳಿ ಹಿಗ್ಗುವ,
ತ್ರಿಗುಣಮಾನಿ ಮಹಾ–ಲಕುಮಿ ಸಂತೈಸಲಿ ಅನುದಿನವು ॥ ೨ ॥

ನಿರುಪಮ–ಆನಂದ–ಆತ್ಮ, ಭವ ನಿರ್ಜರ ಸಭಾಸಂಸೇವ್ಯ,
ಋಜುಗಣದ ಅರಸೆ, ಸತ್ವಪ್ರಚುರ, ವಾಣೀಮುಖಸರೋಜೇನ,
ಗರುಡ ಶೇಷ ಶಶಾಂಕದಳ ಶೇಖರರ ಜನಕ, ಜಗದ್ಗುರುವೇ,
ತ್ವಚ್ಚರಣಗಳಿಗೆ ಅಭಿವಂದಿಸುವೆ, ಪಾಲಿಪುದು ಸನ್ಮತಿಯ ॥ ೩ ॥

ಆರು–ಮೂರು–ಎರಡು–ಒಂದು ಸಾವಿರ ಮೂರು–ಎರಡು ಶತಶ್ವಾಸ ಜಪಗಳ,
ಮೂರು ವಿಧ ಜೀವರೊಳಗೆ ಅಬ್ಜ ಜ ಕಲ್ಪ ಪರಿಯಂತ ತಾ ರಚಿಸಿ,
ಸತ್ವರಿಗೆ ಸುಖ, ಸಂಸಾರ ಮಿಶ್ರರಿಗೆ,
ಅಧಮಜನರಿಗೆ ಅಪಾರ ದು:ಖಗಳ ಈವ, ಗುರು ಪವಮಾನ ಸಲಹೆಮ್ಮ ॥ ೪ ॥

ಚತುರ–ವದನನ ರಾಣಿ, ಅತಿರೋಹಿತ ವಿಮಲ ವಿಜ್ಞಾನಿ,
ನಿಗಮ–ಪ್ರತತಿಗಳಿಗೆ ಅಭಿಮಾನಿ, ವೀಣಾಪಾಣಿ, ಬ್ರಹ್ಮಾಣಿ,
ನತಿಸಿ ಬೇಡುವೆ ಜನನಿ, ಲಕ್ಷ್ಮೀ ಪತಿಯ ಗುಣಗಳ ತುತಿಪುದಕೆ ಸನ್ಮತಿಯ ಪಾಲಿಸಿ,
ನೆಲೆಸು ನೀ ಮದ್ವದನ ಸದನದಲಿ ॥ ೫ ॥

ಕೃತಿರಮಣ ಪ್ರದ್ಯುಮ್ನ ನಂದನೆ,
ಚತುರ–ವಿಂಶತಿ ತತ್ವಪತಿ ದೇವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ,
ಸತತ ಹರಿಯಲಿ–ಗುರುಗಳಲಿ ಸದ್ರತಿಯ ಪಾಲಿಸಿ,
ಭಾಗವತ–ಭಾರತ ಪುರಾಣ ರಹಸ್ಯ ತತ್ವಗಳು, ಅರುಪು ಕರುಣದಲಿ ॥ ೬ ॥

ವೇದಪೀಠ, ವಿರಿಂಚಿ–ಭವ–ಶಕ್ರ ಆದಿ ಸುರ ವಿಜ್ಞಾನ ದಾಯಕ,
ಮೋದ–ಚಿನ್ಮಯ ಗಾತ್ರ, ಲೋಕಪವಿತ್ರ, ಸುಚರಿತ್ರ,
ಛೇದ–ಭೇದ–ವಿಷಾದ–ಕುಟಿಲ–ಅಂತ–ಆದಿ–ಮಧ್ಯ ವಿದೂರ,
ಆ–ದಾ–ನ ಆದಿ ಕಾರಣ ಬಾದರಾಯಣ ಪಾಹಿ ಸತ್ರಾಣ ॥ ೭ ॥

ಕ್ಷಿತಿಯೊಳಗೆ ಮಣಿಮಂತ ಮೊದಲಾದ ಅತಿ ದುರಾತ್ಮರು,
ಒಂದು–ಅಧಿಕ ವಿಂಶತಿ ಕುಭಾಷ್ಯವ ರಚಿಸೆ,
ನಡುಮನೆಯೆಂಬ ಬ್ರಾಹ್ಮಣನ ಸತಿಯ ಜಠರದೊಳು ಅವತರಿಸಿ ಭಾರತಿರಮಣ,
ಮಧ್ವ ಅಭಿಧಾನದಿ, ಚತುರದಶ ಲೋಕದಲಿ ಮೆರೆದ, ಅಪ್ರತಿಮಗೆ ಒಂದಿಸುವೆ ॥ ೮ ॥

ಪಂಚಭೇದಾತ್ಮಕ ಪ್ರಪಂಚಕೆ, ಪಂಚರೂಪ–ಆತ್ಮಕನೆ ದೈವಕ,
ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ,
ಪಂಚವಿಂಶತಿ ತತ್ವ ತರತಮ, ಪಂಚಿಕೆಗಳನು ಪೇಳ್ದ,
ಭಾವಿ ವಿರಿಂಚಿಯೆನಿಪ ಆನಂದತೀರ್ಥರ, ನೆನೆವೆನನುದಿನವು ॥ ೯ ॥

ವಾಮದೇವ, ವಿರಿಂಚಿತನಯ, ಉಮಾಮನೋಹರ, ಉಗ್ರ, ಧೂರ್ಜಟಿ,
ಸಾಮಜಾಜಿನ ವಸನ ಭೂಷಣ, ಸುಮನಸ–ಉತ್ತಂಸ, ಕಾಮಹರ, ಕೈಲಾಸ ಮಂದಿರ,
ಸೋಮ–ಸೂರ್ಯ–ಅನಲ ವಿಲೋಚನ,
ಕಾಮಿತಪ್ರದ, ಕರುಣಿಸೆಮಗೆ ಸದಾ ಸುಮಂಗಲವ ॥ ೧೦ ॥

ಕೃತ್ತಿವಾಸನೆ, ಹಿಂದೆ ನೀ ನಾಲ್ವತ್ತು ಕಲ್ಪಸಮೀರನಲಿ ಶಿಷ್ಯತ್ವ ವಹಿಸಿ – ಅಖಿಳ ಆಗಮಾರ್ಥಗಳೋದಿ,
ಜಲಧಿಯೊಳು ಹತ್ತು ಕಲ್ಪದಿ ತಪವ ಗೈದು,
ಆದಿತ್ಯರೊಳಗೆ ಉತ್ತಮನೆನಿಸಿ,
ಪುರುಷೋತ್ತಮನ ಪರಿಯಂಕ ಪದವೈದಿದೆಯೋ, ಮಹದೇವ ॥ ೧೧ ॥

ಪಾಕಶಾಸನ ಮುಖ್ಯ ಸಕಲ ದಿವೌಕಸರಿಗೆ ಅಭಿನಮಿಪೆ,
ಋಷಿಗಳಿಗೆ, ಏಕ ಚಿತ್ತದಿ ಪಿತೃಗಳಿಗೆ, ಗಂಧರ್ವ–ಕ್ಷಿತಿಪರಿಗೆ,
ಆ ಕಮಲನಾಭಾದಿ ಯತಿಗಳ (ಅ)ನೀಕಕಾನಮಿಸುವೆನು ಬಿಡದೆ,
ರಮಾ ಕಳತ್ರನ ದಾಸವರ್ಗಕೆ ನಮಿಪೆನು, ಅನವರತ ॥ ೧೨ ॥

ಪರಿಮಳವು ಸುಮನದೊಳಗೆ, ಅನಲನು ಅರಣಿಯೊಳಗೆ ಇಪ್ಪಂತೆ,
ದಾಮೋದರನು, ಬ್ರಹ್ಮಾದಿಗಳ ಮನದಲಿ ತೋರಿತೋರದಲೆ ಇರುತಿಹ,
(ಇರುತಿಹ) ಜಗನ್ನಾಥ ವಿಠಲನ ಕರುಣ ಪಡೆವ ಮುಮುಕ್ಷುಜೀವರು,
ಪರಮ ಭಾಗವತರನು ಕೊಂಡಾಡುವುದು ಪ್ರತಿದಿನವು ॥ ೧೩ ॥

॥ ಇತಿ ಶ್ರೀ ಮಂಗಳಾಚರಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಕರುಣಾ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರವಣ ಮನಕೆ ಆನಂದವೀವುದು, ಭವಜನಿತ ದು:ಖಗಳ ಕಳೆವುದು,
ವಿವಿಧ ಭೋಗಗಳು ಇಹಪರಂಗಳಲಿ ಇತ್ತು ಸಲಹುವುದು,
ಭುವನ ಪಾವನವೆನಿಪ ಲಕ್ಷ್ಮೀ ಧವನ ಮಂಗಳ ಕಥೆಯ,
ಪರಮ ಉತ್ಸವದಿ ಕಿವಿಗೊಟ್ಟು ಆಲಿಪುದು, ಭೂಸುರರು ದಿನದಿನದಿ ॥ ೧ ॥

ಮಳೆಯ ನೀರು ಓಣಿಯೊಳು ಪರಿಯಲು, ಬಳಸರು ಊರೊಳಗೆ ಇದ್ದ ಜನರು,
ಆ ಜಲವು ಹೆದ್ದೊರೆಗೂಡೆ ಮಜ್ಜನಪಾನ ಗೈದಪರು,
ಕಲುಷ ವಚನಗಳ ಆದಡೆಯು, ಬಾಂಬೊಳೆಯ ಪೆತ್ತನ ಪಾದ ಮಹಿಮ ಆ ಜಲಧಿ ಪೊಕ್ಕದರಿಂದ,
ಮಾಣ್ದಪರೇ ಮಹೀಸುರರು ॥ ೨ ॥

ಶ್ರುತಿತತಿಗಳ ಅಭಿಮಾನಿ ಲಕ್ಷ್ಮೀ ಸ್ತುತಿಗಳಿಗೆ ಗೋಚರಿಸದ –
ಅಪ್ರತಿಹತ ಮಹ–ಇಶ್ವರ್ಯ–ಆದಿ–ಅಖಿಳ ಸದ್ಗುಣ ಗಣಾಂಭೋಧಿ,
ಪ್ರತಿದಿವಸ ತನ್ನಂಘ್ರಿ–ಸೇವಾರತ ಮಹಾತ್ಮರು ಮಾಡುತಿಹ ಸಂಸ್ತುತಿಗೆವಶನಾಗುವನು,
ಇವನ ಕಾರುಣ್ಯಕೆ ಏನೆಂಬೆ ॥ ೩ ॥

ಮನವಚನಕೆ ಅತಿದೂರ, ನೆನೆವರನು ಅನುಸರಿಸಿ ತಿರುಗುವನು ಜಾಹ್ನವಿ ಜನಕ,
ಜನರ–ಒಳಗಿದ್ದು ಜನಿಸುವ ಜಗದುದರ ತಾನು,
ಘನಮಹಿಮ, ಗಾಂಗೇಯನುತ, ಗಾಯನವ ಕೇಳುತ,
ಗಗನ ಚರ ವಾಹನ ದಿವೌಕಸರೊಡನೆ ಚರಿಸುವ, ಮನೆಮನೆಗಳಲ್ಲಿ ॥ ೪ ॥

ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ,
ಕುಳಿತು ಪಾಡಲು ನಿಲುವ, ನಿಂತರೆ ನಲಿವ, ನಲಿದರೆ ಒಲಿವೆ ನಿಮಗೆ ಎಂಬ,
ಸುಲಭನೋ ಹರಿ, ತನ್ನವರನು ಅರಘಳಿಗೆ ಬಿಟ್ಟಗಲನು,
ರಮಾಧವನ ಒಲಿಸಲರಿಯದೆ, ಪಾಮರರು ಬಳಲುವರು ಭವದೋಳಗೆ ॥ ೫ ॥

ಮನದೊಳಗೆ ತಾನಿದ್ದು ಮನವೆಂದು ಎನಿಸಿಕೊಂಬನು,
ಮನದ ವೃತ್ತಿಗಳ ಅನುಸರಿಸಿ ಭೋಗಂಗಳೀವನು ತ್ರಿವಿಧ ಚೇತನಕೆ,
ಮನವನಿತ್ತರೆ ತನ್ನ ನೀವನು, ತನುವ ದಂಡಿಸಿ ದಿನದಿನದಿ ಸಾಧನವ ಮಾಳ್ಪರಿಗೆ,
ಇತ್ತಪನು ಸ್ವರ್ಗ–ಆದಿ ಭೋಗಗಳ ॥ ೬ ॥

ಪರಮ ಸತ್ಪುರುಷಾರ್ಥರೂಪನು ಹರಿಯು ಲೋಕಕೆ ಎಂದು,
ಪರಮ ಆದರದಿ ಸದ್–ಉಪಾಸನೆಯ ಗೈವರಿಗೆ ಇತ್ತಪನು ತನ್ನ,
ಮರೆದು ಧರ್ಮ–ಅರ್ಥಗಳ ಕಾಮಿಸುವರಿಗೆ ನಗುತ, ಅತಿಶೀಘ್ರದಿಂದಲಿ,
ಸುರಪತನಯ–ಸುಯೋಧನರಿಗೆ ಇತ್ತಂತೆ ಕೊಡುತಿಪ್ಪ ॥ ೭ ॥

ಜಗವನೆಲ್ಲವ ನಿರ್ಮಿಸುವ ನಾಲ್ಮೊಗನ–ಒಳಗೆ ತಾನಿದ್ದು, ಸಲಹುವ,
ಗಗನಕೇಶನೊಳು–ಇದ್ದು ಸಂಹರಿಸುವನು ಲೋಕಗಳ,
ಸ್ವಗತ ಭೇದ ವಿವರ್ಜಿತನು, ಸರ್ವಗ, ಸದ–ಆನಂದ–ಐಕ ದೇಹನು,
ಬಗೆಬಗೆಯ ನಾಮದಲಿ ಕರೆಸುವ, ಭಕುತರನು ಪೊರೆವ ॥ ೮ ॥

ಒಬ್ಬನಲಿ ನಿಂದು–ಆಡುವನು, ಮತ್ತೊಬ್ಬನಲಿ ನೋಡುವನು,
ಬೇಡುವನು ಒಬ್ಬನಲಿ, ನೀಡುವನು, ಮಾತಾಡುವನು ಬೆರಗಾಗಿ,
ಅಬ್ಬರದ ಹೆದ್ದೈವನು ಇವ, ಮತ್ತೊಬ್ಬರನ ಲೆಕ್ಕಿಸನು,
ಲೋಕದೊಳು ಒಬ್ಬನೇ, ತಾ ಬಾಧ್ಯ ಬಾಧಕನಾಹ ನಿರ್ಭೀತ ॥ ೯ ॥

ಶರಣಜನ ಮಂದಾರ, ಶಾಶ್ವತ ಕರುಣಿ, ಕಮಲಾಕಾಂತ, ಕಾಮದ,
ಪರಮ ಪಾವನತರ, ಸುಮಂಗಳ ಚರಿತ, ಪಾರ್ಥಸಖ,
ನಿರುಪಮ–ಆನಂದ–ಆತ್ಮ, ನಿರ್ಗತ ದುರಿತ,
ದೇವವರೇಣ್ಯನೆಂದು ಆದರದಿ ಕರೆಯಲು, ಬಂದೊದಗುವನು ತನ್ನವರ ಬಳಿಗೆ ॥ ೧೦ ॥

ಜನನಿಯನು ಕಾಣದಿಹ ಬಾಲಕ, ನೆನೆನೆನೆದು ಹಲುಬುತಿರೆ,
ಕತ್ತಲೆ ಮನೆಯೊಳು ಅಡಗಿದ್ದು, ಅವನ ನೋಡುತ ನಗುತ ಹರುಷದಲಿ,
ತನಯನಂ ಬಿಗಿದಪ್ಪಿ ರಂಬಿಸಿ ಕನಲಿಕೆಯ ಕಳೆವಂತೆ,
ಮಧುಸೂದನನು ತನ್ನವರು ಇದ್ದೆಡೆಗೆ ಬಂದೊದಗಿ ಸಲಹುವನು ॥ ೧೧ ॥

ಇಟ್ಟಿಕಲ್ಲನು ಭಕುತಿಯಿಂದಲಿ ಕೊಟ್ಟ ಭಕುತಗೆ ಮೆಚ್ಚಿ ತನ್ನನೆ ಕೊಟ್ಟ,
ಬಡಬ್ರಾಹ್ಮಣನ ಒಪ್ಪಿಡಿಯವಲಿಗೆ ಅಖಿಳಾರ್ಥ,
ಕೆಟ್ಟ ಮಾತುಗಳೆಂದ ಚೈದ್ಯನ ಪೊಟ್ಟೆಯೊಳಗಿಂಬಿಟ್ಟ,
ಬಾಣದ ಲಿಟ್ಟ ಭೀಷ್ಮನ ಅವಗುಣಗಳೆಣಿಸಿದನೇ ಕರುಣಾಲು ॥ ೧೨ ॥

ಧನವ ಸಂರಕ್ಷಿಸುವ ಫಣಿ ತಾನುಣದೆ ಮತ್ತೊಬ್ಬರಿಗೆ ಕೊಡದೆ,
ಅನುದಿನದಿ ನೋಡುತ ಸುಖಿಸುವಂದದಿ,
ಲಕುಮಿವಲ್ಲಭನು ಪ್ರಣತರನು ಕಾಯ್ದಿಹನು, ನಿಷ್ಕಾಮನದಿ,
ನಿತ್ಯ–ಆನಂದಮಯ ದುರ್ಜನರ ಸೇವೆಯನು ಒಲ್ಲನು, ಅಪ್ರತಿಮಲ್ಲ ಜಗಕೆಲ್ಲ ॥ ೧೩ ॥

ಬಾಲಕನ ಕಲಭಾಷೆ ಜನನಿ ಕೇಳಿ ಸುಖಪಡುವಂತೆ,
ಲಕ್ಷ್ಮೀಲೋಲ, ಭಕ್ತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು,
ತಾಳ, ತನ್ನವರಲ್ಲಿ ಮಾಡ್ವ ಅವಹೇಳನವ,
ಹೆದ್ದೈವ, ವಿದುರನ ಆಲಯದಿ ಪಾಲುಂಡು, ಕುರುಪನ ಮಾನವನೆ ಕೊಂಡ ॥ ೧೪ ॥

ಸ್ಮರಿಸುವವರ ಅಪರಾಧಗಳ ತಾಸ್ಮರಿಸ, ಸಕಲ ಇಷ್ಟ ಪ್ರದಾಯಕ,
ಮರಳಿ ತನಗೆ ಅರ್ಪಿಸಲು ಕೊಟ್ಟುದ ಅನಂತಮಡಿ ಮಾಡಿ ಪರಿಪರಿಯಲಿಂದ ಉಣಿಸಿ –
ಸುಖ ಸಾಗರದಿ ಲೋಲಾಡಿಸುವ, ಮಂಗಳಚರಿತ,
ಚಿನ್ಮಯಗಾತ್ರ, ಲೋಕಪವಿತ್ರ, ಸುಚರಿತ್ರ ॥ ೧೫ ॥

ಏನು ಕರುಣಾನಿಧಿಯೋ ಹರಿ, ಮತ್ತೇನು ಭಕ್ತಾಧೀನನೋ,
ಇನ್ನೇನು ಈತನ ಲೀಲೆ, ಇಚ್ಛಾಮಾತ್ರದಲಿ ಜಗವ ತಾನೆ ಸೃಜಿಸುವ–ಪಾಲಿಸುವ–
ನಿರ್ವಾಣ ಮೊದಲಾದ ಅಖಿಳ ಲೋಕಸ್ಥಾನದಲಿ,
ಮತ್ತೆ ಅವರನು ಇಟ್ಟು ಆನಂದ ಬಡಿಸುವನು ॥ ೧೬ ॥

ಜನಪ ಮೆಚ್ಚಿದರೆ ಈವ ಧನ–ವಾಹನ–ವಿಭೂಷಣ–ವಸನ–ಭೂಮಿ,
ತನು–ಮನಗಳ ಇತ್ತು ಆದರಿಪರು ಉಂಟೇನೋ ಲೋಕದೊಳು,
ಅನವರತ ನೆನೆವವರ, ಅನಂತಾಸನವೆ ಮೊದಲಾದ ಆಲಯದೊಳಿಟ್ಟು,
ಅಣುಗನಂದದಲಿ ಅವರ ವಶನಾಗುವ ಮಹಾಮಹಿಮ ॥ ೧೭ ॥

ಭುವನ ಪಾವನ ಚರಿತ, ಪುಣ್ಯ ಶ್ರವಣ ಕೀರ್ತನ, ಪಾಪ ನಾಶನ,
ಕವಿಭಿರೀಡಿತ, ಕೈರವದಳಶ್ಯಾಮ, ನಿಸ್ಸೀಮ,
ಯುವತಿವೇಷದಿ ಹಿಂದೆ ಗೌರೀಧವನ ಮೋಹಿಸಿ ಕೆಡಿಸಿ ಉಳಿಸಿದ,
ಇವನ ಮಾಯವ ಗೆಲುವ ನಾವನು ಈ ಜಗತ್ರಯದಿ ॥ ೧೮ ॥

ಪಾಪಕರ್ಮವ ಸಹಿಸುವಡೆ ಲಕ್ಷ್ಮೀಪತಿಗೆ ಸಮರಾದ ದಿವಿಜರನು,
ಈ ಪಯೋಜಭವಾಂಡದೊಳಗೆ ಆವಲ್ಲಿ ನಾ ಕಾಣೆ,
ಗೋಪ–ಗುರುವಿನ ಮಡದಿ–ಭೃಗು–ನಗಚಾಪ ಮೊದಲಾದವರು ಮಾಡ್ದ,
ಮಹ ಅಪರಾಧಗಳ ಎಣಿಸಿದನೆ, ಕರುಣಾ ಸಮುದ್ರ ಹರಿ ॥ ೧೯ ॥

ಅಂಗುಟಾಗ್ರದಿ ಜನಿಸಿದ ಅಮರತರಂಗಿಣಿಯು ಲೋಕತ್ರಯಗಳ ಅಘಹಿಂಗಿಸುವಳು,
ಅವ್ಯಾಕೃತಾಶಾಂತ ವ್ಯಾಪಿಸಿದ ಇಂಗಡಲ ಮಗಳ ಒಡೆಯನ,
ಅಂಗ-ಉಪಾಂಗಗಳಲಿ ಇಪ್ಪ,
ಅಮಲ ಅನಂತ ಸುಮಂಗಳಪ್ರದ ನಾಮ, ಪಾವನಮಾಳ್ಪದೇನರಿದು ॥ ೨೦ ॥

ಕಾಮಧೇನು-ಸುಕಲ್ಪತರು-ಚಿಂತಾಮಣಿಗಳು,
ಅಮರೇಂದ್ರ ಲೋಕದಿ ಕಾಮಿತಾರ್ಥಗಳು ಈವ ವಲ್ಲದೆ ಸೇವೆ ಮಾಳ್ಪರಿಗೆ,
ಶ್ರೀಮುಕುಂದನ ಪರಮ ಮಂಗಳನಾಮ, ನರಕಸ್ಥರನು ಸಲಹಿತು,
ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ॥ ೨೧ ॥

ಮನದೊಳಗೆ ಸುಂದರ ಪದಾರ್ಥವ ನೆನೆದು ಕೊಡೆ ಕೈಕೊಂಡು,
ಬಲು ನೂತನ ಸುಶೋಭಿತ ಗಂಧ ಸುರಸೋಪೇತ ಫಲರಾಶಿ, ದ್ಯುನದಿ ನಿವಹಗಳಂತೆ ಕೊಟ್ಟು,
ಅವರನು ಸದಾ ಸಂತೈಸುವನು,
ಸದ್ಗುಣವ ಕದ್ದವರ ಅಘವ ಕದಿವನು, ಅನಘನೆಂದೆನಿಸಿ ॥ ೨೨ ॥

ಚೇತನಾ ಚೇತನ ವಿಲಕ್ಷಣ, ನೂತನ ಪದಾರ್ಥಗಳೊಳಗೆ ಬಲುನೂತನ,
ಅತಿಸುಂದರಕೆ ಸುಂದರ, ರಸಕೆ ರಸರೂಪ,
ಜಾತರೂಪ-ಉದರ ಭವ ಆದ್ಯರೊಳು, ಆತತ ಪ್ರತಿಮ ಪ್ರಭಾವ,
ಧರಾತಳದೊಳು ಎಮ್ಮೊಡನೆ ಆಡುತಲಿಪ್ಪ ನಮ್ಮಪ್ಪ ॥ ೨೩ ॥

ತಂದೆ ತಾಯ್ಗಳು ತಮ್ಮ ಶಿಶುವಿಗೆ ಬಂದ ಭಯಗಳ ಪರಿಹರಿಸಿ,
ನಿಜ ಮಂದಿರದಿ ಬೇಡಿದುದನು ಇತ್ತು ಆದರಿಸುವಂದದಲಿ,
ಹಿಂದೆ-ಮುಂದೆ-ಎಡ-ಬಲದಿ-ಒಳ-ಹೊರಗೆ ಇಂದಿರೇಶನು ತನ್ನವರನು
ಎಂದೆಂದು ಸಲಹುವನು ಆಗಸದವೋಲ್ ಎತ್ತ ನೋಡಿದರು ॥ ೨೪ ॥

ಒಡಲ ನೆಳಲಂದದಲಿ ಹರಿ ನಮ್ಮೊಡನೆ ತಿರುಗುವನು,
ಒಂದು ಅರಕ್ಷಣ ಬಿಡದೆ ಬೆಂಬಲವಾಗಿ ಭಕ್ತಾಧೀನನೆಂದೆನಿಸಿ,
ತಡೆವ ದುರಿತೌಘಗಳ, ಕಾಮದ-ಕೊಡುವ ಸಕಲೇಷ್ಟಗಳ,
ಸಂತತ ನಡೆವ ನಮ್ಮಂದದಲಿ, ನವಿಸು ವಿಶೇಷ ಸನ್ಮಹಿಮ ॥ ೨೫ ॥

ಬಿಟ್ಟವರ ಭವಪಾಶದಿಂದಲಿ ಕಟ್ಟುವನು ಬಹುಕಠಿಣನಿವ,
ಶಿಷ್ಟೇಷ್ಟನೆಂದರಿದು ಅನವರತ ಸದ್ಭಕ್ತಿ ಪಾಶದಲಿ ಕಟ್ಟುವರ ಭವಕಟ್ಟು ಬಿಡಿಸುವ,
ಸಿಟ್ಟಿನವನು ಇವನಲ್ಲ,
ಕಾಮದ-ಕೊಟ್ಟುಕಾವನು ಸಕಲ ಸೌಖ್ಯವನು ಇಹಪರಂಗಳಲಿ ॥ ೨೬ ॥

ಕಣ್ಣಿಗೆ ಎವೆಯಂದದಲಿ, ಕೈ ಮೈ ತಿಣ್ಣಿಗೊದಗುವ ತೆರದಿ,
ಪಲ್ಗಳು ಪಣ್ಣು ಫಲಗಳನಗಿದು ಜಿಹ್ವೆಗೆ ರಸವನೀವಂತೆ,
ಪುಣ್ಯ ಫಲವ ಈವಂದದಲಿ ನುಡಿವೆಣ್ಣಿ ನಾಣ್ಮಾಂಡದೊಳು,
ಲಕ್ಷ್ಮಣನ ಅಣ್ಣನು ಒದಗುವ, ಭಕ್ತರ ಅವಸರಕೆ ಅಮರಗಣ ಸಹಿತ ॥ ೨೭ ॥

ಕೊಟ್ಟದನು ಕೈಕೊಂಬ, ಅರಕ್ಷಣಬಿಟ್ಟಗಲ ತನ್ನವರ,
(ತನ್ನವರ) ದುರಿತಗಳು ಅಟ್ಟುವನು ದೂರದಲಿ, ದುರಿತಾರಣ್ಯ ಪಾವಕನು,
ಬೆಟ್ಟ ಬೆನ್ನಿಲಿ ಹೊರಿಸಿದವರೊಳು, ಸಿಟ್ಟು ಮಾಡಿದನೇನೋ ಹರಿ,
ಕಂಗೆಟ್ಟ ಸುರರಿಗೆ ಸುಧೆಯನು ಉಣಿಸಿದ, ಮುರಿದನಹಿತರನಾ ॥ ೨೮ ॥

ಖೇದ-ಮೋದ-ಜಯ-ಅಪಜಯ ಮೊದಲಾದ ದೋಷಗಳಿಲ್ಲ ಚಿನ್ಮಯ ಸಾದರದಿ,
ತನ್ನಂಘ್ರಿಕಮಲವ ನಂಬಿ ಸ್ತುತಿಸುವರ ಕಾದುಕೊಂಡಿಹ,
ಪರಮಕರುಣ ಮಹೋದಧಿಯು ತನ್ನವರು ಮಾಡ್ದ -
ಮಹ ಅಪರಾಧಗಳ ನೋಡದಲೆ ಸಲಹುವ ಸರ್ವಕಾಮದನು ॥ ೨೯ ॥

ಮೀನ-ಕೂರ್ಮ-ವರಾಹ-ನರಪಂಚಾನನ ಅತುಳ ಶೌರ್ಯ-
ವಾಮನ-ರೇಣುಕಾತ್ಮಜ-ರಾವಣಾದಿನಿಶಾಚರಧ್ವಂಸಿ-
ಧೇನುಕಾಸುರಮಥನ-ತ್ರಿಪುರವ ಹಾನಿಗೈಸಿದ ನಿಪುಣ-
ಕಲಿಮುಖ ದಾನವರ ಸಂಹರಿಸಿ ಧರ್ಮದಿ ಕಾಯ್ದ ಸುಜನರನಾ ॥ ೩೦ ॥

ಶ್ರೀ ಮನೋರಮ, ಶಮಲ ವರ್ಜಿತ, ಕಾಮಿತಪ್ರದ,
ಕೈರವದಳ ಶ್ಯಾಮ, ಶಬಲ, ಶರಣ್ಯ, ಶಾಶ್ವತ, ಶರ್ಕರಾಕ್ಷ ಸಖ,
ಸಾಮಸನ್ನುತ, ಸಕಲ ಗುಣಗಣಧಾಮ,
ಶ್ರೀ ಜಗನ್ನಾಥ ವಿಠಲನು ಈ ಮಹಿಯೊಳು ಅವತರಿಸಿ ಸಲಹಿದ, ಸಕಲ ಸುಜನರನಾ ॥ ೩೧ ॥

॥ ಇತಿ ಶ್ರೀ ಕರುಣಾ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ವ್ಯಾಪ್ತಿ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಪುರುಷರೂಪತ್ರಯ, ಪುರಾತನ ಪುರುಷ, ಪುರುಷ ಉತ್ತಮ,
ಕ್ಷರ–ಅಕ್ಷರ ಪುರುಷ ಪೂಜಿತ ಪಾದ, ಪೂರ್ಣ–ಆನಂದ ಜ್ಞಾನಮಯ,
ಪುರುಷಸೂಕ್ತ ಸುಮೇಯ, ತತ್ತತ್ ಪುರುಷ, ಹೃತ್–ಪುಷ್ಕರ ನಿಲಯ,
ಮಹ ಪುರುಷ, ಅಜಾಂಡ ಅಂತರದಿ–ಬಹಿರದಿ ವ್ಯಾಪ್ತ, ನಿರ್ಲಿಪ್ತ ॥ ೧ ॥

ಸ್ತ್ರೀ–ನಪುಂಸಕ–ಪುರುಷ–ಭೂ–ಸಲಿಲ–ಅನಲ–ಅನಿಲ–ಗಗನ–ಮನ–ಶಶಿ–ಭಾನು–ಕಾಲ–ಗುಣ–
ಪ್ರಕೃತಿಯೊಳಗೆ ಒಂದು ತಾನಲ್ಲ,
ಏನು ಇವನ ಮಹಾಮಹಿಮೆ, ಕಡೆಗಾಣರು ಅಜಭವ–ಶಕ್ರ ಮುಖರು,
ನಿದಾನಿಸಲು ಮಾನವರಿಗೆ ಅಳವಡುವದೇ ವಿಚಾರಿಸಲು ॥ ೨ ॥

ಗಂಧ–ರಸ–ರೂಪ–ಸ್ಪರಶ–ಶಬ್ದ ಒಂದು ತಾನಲ್ಲ,
ಅದರದರ ಪೆಸರಿಂದ ಕರೆಸುತ ಜೀವರಿಗೆ ತರ್ಪಕನು ತಾನಾಗಿ,
ಪೊಂದಿಕೊಂಡಿಹ ಪರಮ ಕರುಣಾಸಿಂಧು, ಶಾಶ್ವತ,
ಮನವೆ ಮೊದಲಾದ ಇಂದ್ರಿಯಗಳೊಳಗೆ ಇದ್ದು ಭೋಗಿಸುತಿಹನು ವಿಷಯಗಳ ॥ ೩ ॥

ಶ್ರವಣ–ನಯನ–ಘ್ರಾಣ–ತ್ವಗ್(ಕ್)–ರಸನ ಇವುಗಳೊಳು,
ವಾಕ್–ಪಾಣಿ–ಪಾದ ಆದಿ ಅವಯುವಗಳೊಳು–ತದ್ಗುಣಗಳೊಳು–ತತ್ಪತಿಗಳೊಳಗೆ,
ಪ್ರವಿತತನು ತಾನಾಗಿ ಕೃತಿಪತಿ ವಿವಿಧ ಕರ್ಮವ ಮಾಡಿ ಮಾಡಿಸಿ,
ಭವಕೆ ಕಾರಣನಾಗಿ ತಿರುಗಿಸುತಿಹನು ತಿಳಿಸದಲೆ ॥ ೪ ॥

ಗುಣಿ–ಗುಣಗಳೊಳಗೆ ಇದ್ದು ಗುಣಿ–ಗುಣನು ಎನಿಸುವನು, ಗುಣಬದ್ಧನಾಗದೆ,
ಗುಣಜ ಪುಣ್ಯ–ಅಪುಣ್ಯ ಫಲ ಬ್ರಹ್ಮಾದಿಚೇತನಕೆ ಉಣಿಸುತ ಅವರೊಳಗಿದ್ದು,
ವೃಜಿನ ಅರ್ದನ, ಚಿತ್–ಆನಂದೈಕ ದೇಹನು,
ಕೊನೆಗೆ ಸಚರ–ಅಚರ ಜಗದ್ಭುಕುವೆನಿಪನು ಅವ್ಯಯನು ॥ ೫ ॥

ವಿದ್ಯೆ ತಾನೆನಿಸಿಕೊಂಬ ಅನಿರುದ್ಧದೇವನು,
ಸರ್ವಜೀವರ ಬುದ್ಧಿಯಲಿ ತಾನಿದ್ದು ಕೃತಿಪತಿ ಬುದ್ಧಿಯೆನಿಸುವನು,
ಸಿದ್ಧಿಯೆನಿಸುವ ಸಂಕರುಷನ, ಪ್ರಸಿದ್ಧನಾಮಕ ವಾಸುದೇವ,
ಅನವದ್ಯ ರೂಪ ಚತುಷ್ಟಯುಗಳ ಅರಿತವನೆ ಪಂಡಿತನು ॥ ೬ ॥

ತನುಚತುಷ್ಟಯುಗಳೊಳು ನಾರಾಯಣನು, ಹೃತ್-ಕಮಲಾಖ್ಯ ಸಿಂಹಾಸನದೊಳು,
ಅನಿರುದ್ಧಾದಿ ರೂಪಗಳಿಂದ ಶೋಭಿಸುತ,
ತನಗೆ ತಾನೇ ಸೇವ್ಯ ಸೇವಕನೆನಿಸಿ, ಸೇವಾಸಕ್ತ ಸುರರೊಳಗೆ
ಅನವರತ ನೆಲೆಸಿದ್ದು ಸೇವೆಯ ಕೊಂಬನವರಂತೆ ॥ ೭ ॥

ಜಾಗರ ಸ್ವಪ್ನಂಗಳ ಒಳು ವರಭೋಗಿಶಯನನು ಬಹು ಪ್ರಕಾರ ವಿಭಾಗಗೈಸಿ,
ನಿರಂಶಜೀವರ ಚಿತ್-ಶರೀರವನು ಭೋಗವಿತ್ತು,
ಸುಷುಪ್ತಿಕಾಲದಿ ಸಾಗರವ ನದಿ ಕೂಡುವಂತೆ,
ವಿಯೋಗರಹಿತನು, ಅಂಶಗಳನು ಏಕತ್ರವೈದಿಸುವ ॥ ೮ ॥

ಭಾರ್ಯರಿಂದ ಒಡಗೂಡಿ ಕಾರಣ-ಕಾರ್ಯ ವಸ್ತುಗಳಲ್ಲಿ,
ಪ್ರೇರಕ-ಪ್ರೇರ್ಯ ರೂಪಗಳಿಂದ ಪಟತಂತುಗಳವೋಲಿದ್ದು,
ಸೂರ್ಯ ಕಿರಣಗಳಂತೆ, ತನ್ನಯ ವೀರ್ಯದಿಂದಲಿ ಕೊಡುತ ಕೊಳುತಿಹ,
ಅನಾರ್ಯರಿಗೆ ಈತನ ವಿಹಾರವು ಗೋಚರಿಪುದೇನೋ? ॥ ೯ ॥

ಜನಕ ತನ್ನ ಆತ್ಮಜಗೆ, ವರ ಭೂಷಣ-ದುಕೂಲವ ತೊಡಿಸಿ,
ತಾ ವಂದನೆಯ ಕೈಕೊಳುತ, ಅವನ ಹರಸುತ, ಹರುಷಬಡುವಂತೆ,
ವನರುಹೇಕ್ಷಣ, ಪೂಜ್ಯ-ಪೂಜಕನು ಎನಿಸಿ, ಪೂಜಾಸಾಧನ ಪದಾರ್ಥನು ತನಗೆ ತಾನಾಗಿ,
ಫಲಗಳನೀವ ಭಜಕರಿಗೆ ॥ ೧೦ ॥

ತಂದೆ ಬಹು ಸಂಭ್ರಮದಿ, ತನ್ನಯ ಬಂಧು ಬಳಗವ ನೆರಹಿ,
ಮದುವೆಯ ನಂದನಗೆ ತಾ ಮಾಡಿ, ಮನೆಯೊಳಗಿಡುವ ತೆರದಂತೆ,
ಇಂದಿರಾಧವ, ತನ್ನ ಇಚ್ಛೆಯಲಿಂದ ಗುಣಗಳ ಚೇತನಕೆ ಸಂಬಂಧಗೈಸಿ,
ಸುಖ-ಅಸುಖ-ಆತ್ಮಕ ಸಂಸೃತಿಯೊಳು ಇಡುವ ॥ ೧೧ ॥

ತೃಣ ಕೃತ ಆಲಯದೊಳಗೆ ಪೊಗೆ ಸಂದಣಿಸಿ ಪ್ರತಿ ಛಿದ್ರದಲಿ ಪೊರಮಟ್ಟು,
ಅನಳ ನಿರವನು ತೋರಿ ತೋರದಲಿಪ್ಪ ತೆರದಂತೆ,
ವನಜ-ಜ-ಅಂಡದೊಳು ಅಖಿಳ ಜೀವರ ತನುವಿನ ಒಳ-ಹೊರಗೆ ಇದ್ದು
ಕಾಣಿಸದೆ ಅನಿಮಿಷೇಶನು ಸಕಲ ಕರ್ಮವ ಮಾಳ್ಪನು ಅವರಂತೆ ॥ ೧೨ ॥

ಪಾದಪಗಳ ಅಡಿಗೆ ಎರೆಯೆ ಸಲಿಲವು, ತೋದು ಕೊಂಬಿಗಳು ಉಬ್ಬಿ,
ಪುಷ್ಪ-ಸ್ವಾದು ಫಲವ ಈವಂದದಲಿ,
ಸರ್ವ ಈಶ್ವರನು ಜನರ ಆರಾಧನೆಯ ಕೈಕೊಂಡು, ಬ್ರಹ್ಮ-ಭವ ಆದಿಗಳ ನಾಮದಲಿ ಫಲವಿತ್ತು
ಆದರಿಸುವನು ತನ್ನ ಮಹಿಮೆಯ ತೋರಗೊಡ ಜನಕೆ ॥ ೧೩ ॥

ಶ್ರುತಿತತಿಗಳಿಗೆ ಗೋಚರಿಸದ ಅಪ್ರತಿಮ-ಅಜ-ಆನಂದ-ಆತ್ಮನು-ಅಚ್ಯುತ-ವಿತತ-
ವಿಶ್ವ ಆಧಾರ-ವಿದ್ಯ ಅಧೀಶ-ವಿಧಿ ಜನಕ,
ಪ್ರತಿದಿವಸ ಚೇತನರೊಳಗೆ ಪ್ರಾಕೃತ ಪುರುಷನಂದದಲಿ ಸಂಚರಿಸುತ,
ನಿಯಮ್ಯ-ನಿಯಾಮಕನು ತಾನಾಗಿ ಸಂತೈಪ ॥ ೧೪ ॥

ಮನ ವಿಷಯದೊಳಗೆ ಇರಿಸಿ, ವಿಷಯವ ಮನದೊಳಗೆ ನೆಲೆಗೊಳಿಸಿ,
ಬಲು ನೂತನವು-ಸುಸಮೀಚೀನವಿದು-ಉಪಾದೇಯ ವೆಂದೆನಿಸಿ,
ಕನಸಿಲಾದರು ತನ್ನ ಪಾದದ ನೆನೆವನು ಈಯದೆ,
ಸರ್ವರೊಳಗೆ ಇದ್ದು ಅನುಭವಿಸುವನು ಸ್ಥೂಲ ವಿಷಯವ ವಿಶ್ವನೆಂದೆನಿಸಿ ॥ ೧೫ ॥

ತೋದಕನು ತಾನಾಗಿ ಮನ ಮೊದಲಾದ ಕರಣದೊಳು ಇದ್ದು ವಿಷಯವ ನೈದುವನು,
ನಿಜಪೂರ್ಣ-ಸುಖಮಯ ಗ್ರಾಹ್ಯ-ಗ್ರಾಹಕನು,
ವೇದ ವೇದ್ಯನು ತಿಳಿಯದವನೋಪಾದಿ (ತಿಳಿಯದೆ, ಅವನೋಪಾದಿ) ಭುಂಜಿಸುತ,
ಎಲ್ಲರೊಳಗೆ ಆಹ್ಲಾದ ಬಡುವನು, ಭಕ್ತವತ್ಸಲ-ಭಾಗ್ಯಸಂಪನ್ನ ॥ ೧೬ ॥

ನಿತ್ಯ-ನಿಗಮ ಅತೀತ-ನಿರ್ಗುಣ-ಭೃತ್ಯವತ್ಸಲ-ಭಯವಿನಾಶನ-
ಸತ್ಯಕಾಮ-ಶರಣ್ಯ-ಶ್ಯಾಮಲ-ಕೋಮಲ ಅಂಗ-ಸುಖಿ,
ಮತ್ತನಂದದಿ ಮರ್ತ್ಯರ ಒಳ-ಹೊರಗೆ ಎತ್ತ ನೋಡಲು ಸುತ್ತುತ ಇಪ್ಪನು,
ಅತ್ಯಧಿಕ ಸಂತೃಪ್ತ-ತ್ರಿ ಜಗದ್ ವ್ಯಾಪ್ತ-ಪರಮಾಪ್ತ ॥ ೧೭ ॥

ಪವಿ-ಹರಿನ್ಮಣಿ-ವಿದ್ರುಮದ ಸಚ್ಛವಿಗಳ ಅಂದದಿ,
ರಾಜಿಸುತ ಮಾಧವ ನಿರಂತರ ದೇವ-ಮಾನವ-ದಾನವರೊಳು ಇದ್ದು,
ತ್ರಿವಿಧ ಗುಣ ಕರ್ಮ ಸ್ವಭಾವವ, ಪವನಮುಖ ದೇವಾಂತರಾತ್ಮಕ,
ದಿವಸ ದಿವಸದಿ ವ್ಯಕ್ತಮಾಡುತಲಿ ಅವರೊಳಿದ್ದು ಉಣಿಪ ॥ ೧೮ ॥

ಅಣು ಮಹತ್ತಿನೊಳು ಇಪ್ಪ, ಘನ ಪರಮಣುವಿನೊಳು ಅಡಗಿಸುವ,
ಸೂಕ್ಷ್ಮವ ಮುಣುಗಿಸುವ, ತೇಲಿಸುವ ಸ್ಥೂಲಗಳ, ಅವನ ಮಾಯವಿದು,
ದನುಜ ರಾಕ್ಷಸರು ಎಲ್ಲರು ಇವನೊಳು ಮುನಿದು ಮಾಡುವದೇನು
ಉಲೂಖಲ ಒನಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ ॥ ೧೯ ॥

ದೇವ ಮಾನವ ದಾನವರು ಎಂದು ಈ ವಿಧದಲಿ ಆವಾಗಲಿ ಇಪ್ಪರು,
ಮೂವರೊಳಗೆ ಇವಗೆ ಇಲ್ಲ ಸ್ನೇಹ-ಉದಾಸೀನ-ದ್ವೇಷ,
ಜೀವರ ಅಧಿಕಾರ ಅನುಸಾರದಲಿ ಈವ, ಸುಖ-ಸಂಸಾರ-ದು:ಖವ,
ತಾ ಉಣದಲೆ ಅವರವರಿಗೆ ಉಣಿಸುವ ನಿರ್ಗತಾಶನನು ॥ ೨೦ ॥

ಎಲ್ಲಿ ಕೇಳಿದರೆ, ಎಲ್ಲಿ ನೋಡಿದರೆ, ಎಲ್ಲಿ ಬೇಡಿದರೆ, ಎಲ್ಲಿ ನೀಡಿದರೆ,
ಎಲ್ಲಿ ಓಡಿದರೆ, ಎಲ್ಲಿ ಆಡಿದರೆ, ಅಲ್ಲೆ ಇರುತಿಹನು,
(ಎಲ್ಲಿ ಕೇಳಿದರೆ ಅಲ್ಲಿ, ನೋಡಿದರೆ ಅಲ್ಲಿ, ಬೇಡಿದರೆ ಅಲ್ಲಿ, ನೀಡಿದರೆ ಅಲ್ಲಿ,
ಓಡಿದರೆ ಅಲ್ಲಿ, ಆಡಿದರೆ ಅಲ್ಲಿ ಇರುತಿಹನು,)
ಬಲ್ಲಿದರಿಗೆ ಅತಿ ಬಲ್ಲಿದನು, ಸರಿಯಿಲ್ಲ ಇವಗೆ ಆವಲ್ಲಿ ನೋಡಲು,
ಖುಲ್ಲಮಾನವರೊಲ್ಲನು, ಅಪ್ರತಿಮಲ್ಲ ಜಗಕೆಲ್ಲ ॥ ೨೧ ॥

ತಪ್ತ ಲೋಹವು ನೋಳ್ಪ ಜನರಿಗೆ ಸಪ್ತ ಜಿಹ್ವನ ತೆರದಿ ತೋರ್ಪದು,
ಲುಪ್ತ ಪಾವಕ ಲೋಹ ಕಾಂಬುದು ಪೂರ್ವದೋಪಾದಿ,
ಸಪ್ತವಾಹನ ನಿಖಿಳ ಜನರೊಳು ವ್ಯಾಪ್ತನು ಆದುದರಿಂದ,
ಸರ್ವರು ಆಪ್ತರು ಆಗಿಹರು ಎಲ್ಲ ಕಾಲದಿ ಹಿತವ ಕೈಕೊಂಡು ॥ ೨೨ ॥

ವಾರಿದನು ಮಳೆಗರೆಯೆ, ಬೆಳೆದಿಹ ಭೂರುಹಂಗಳು ಚಿತ್ರ ಫಲರಸ ಬೇರೆ ಬೇರೆ ಇಪ್ಪಂತೆ,
ಬಹುವಿಧ ಜೀವರೊಳಗೆ ಇದ್ದು ಮಾರಮಣನು,
ಅವರವರ ಯೋಗ್ಯತೆ ಮೀರದಲೆ, ಗುಣಕರ್ಮಗಳ ಅನುಸಾರ ನಡೆಸುವ,
ದೇವನಿಗೆ ವೈಷಮ್ಯವೆಲ್ಲಿಹುದೋ ॥ ೨೩ ॥

ವಾರಿಜ-ಆಪ್ತನ ಕಿರಣ, ಮಣಿಗಳ ಸೇರಿ ತತ್ತತ್-ವರ್ಣಗಳನು
ವಿಕಾರಗೈಸದೆ ನೋಳ್ಪರಿಗೆ ಕಂಗೊಳಿಸುವಂದದಲಿ,
ಮಾರಮಣ ಲೋಕತ್ರಯದೊಳು ಇಹ, ಮೂರುವಿಧ ಜೀವರೊಳಗೆ ಇದ್ದು ವಿಹಾರಮಾಡುವನು,
ಅವರ ಯೋಗ್ಯತೆ ಕರ್ಮವ ಅನುಸರಿಸಿ ॥ ೨೪ ॥

ಜಲವನು ಅಪಹರಿಸುವ ಘಳಿಗೆ ಬಟ್ಟಲನು ಉಳಿದು,
ಜಯಘಂಟೆ ಕೈಪಿಡಿದು ಎಳೆದು ಹೊಡೆವಂದದಲಿ,
ಸಂತತ ಕರ್ತೃತಾನಾಗಿ ಹಲ-ಧರ ಅನುಜ, ಪುಣ್ಯ-ಪಾಪದ ಫಲಗಳನು,
ದೇವ-ಅಸುರರ ಗಣದೊಳು ವಿಭಾಗವ ಮಾಡಿ ಉಣಿಸುತ, ಸಾಕ್ಷಿಯಾಗಿಪ್ಪ ॥ ೨೫ ॥

ಪೊಂದಿಕೊಂಡಿಹ ಸರ್ವರೊಳು ಸಂಬಂಧವಾಗದೆ,
ಸಕಲಕರ್ಮವ ಅರಂದದಲಿ ತಾ ಮಾಡಿಮಾಡಿಪ ತತ್ಫಲಗಳುಣದೆ, ।
ಕುಂದದೆ, ಅಣು–ಮಾಹತ್ತು ಎನಿಪ, ಘಟಮಂದಿರದಿ ಸರ್ವತ್ರ ತುಂಬಿಹ,
ಬಾಂದಳದ ತೆರದಂತೆ ಇರುತಿಪ್ಪನು ರಮಾರಮಣ ॥ ೨೬ ॥

ಕಾದ ಕಬ್ಬಿಣ ಹಿಡಿದು ಬಡಿಯಲು ವೇದನೆಯು ಲೋಹಗಳಿಗೆ ಅಲ್ಲದೆ,
ಆದುದೇನೈ ಅನಳಗಾ ವ್ಯಥೆ ಏನು ಮಾಡಿದರು,
ಆದಿದೇವನು ಸರ್ವ ಜೀವರ ಕಾದುಕೊಂಡಿಹನು ಒಳ–ಹೊರಗೆ,
ದು:ಖಾದಿಗಳು ಸಂಬಂಧವಾಗುವವೇನೋ ಚಿನ್ಮಯಗೆ? ॥ ೨೭ ॥

ಮಳಲ ಮನೆಗಳ ಮಾಡಿ, ಮಕ್ಕಳು ಕೆಲವು ಕಾಲದಲಾಡಿ, ಮೋದದಿ ತುಳಿದು ಕೆಡಿಸುವ ತೆರದಿ,
ಲಕ್ಷ್ಮೀರಮಣ, ಲೋಕಗಳ ಹಲವು ಬಗೆಯಲಿ ನಿರ್ಮಿಸುವ,
ನಿಶ್ಚಲನು ತಾನಾಗಿದ್ದು ಸಲಹುವ,
ಎಲರುಣಿಯವೋಲ್ ನುಂಗುವಗೆ ಎಲ್ಲಿಹುದೋ ಸುಖ–ದು:ಖ ॥ ೨೮ ॥

ವೇಷ–ಭಾಷೆಗಳ ಇಂದ ಜನರ ಪ್ರಮೋಷಗೈಸುವ ನಟಪುರುಷನೋಲ್,
ದೋಷದೂರನು, ಲೋಕದೊಳು ಬಹುರೂಪ–ಮಾತಿನಲಿ ತೋಷಿಸುವನು,
ಅವರವರ ಮನದ ಅಭಿಲಾಷೆಗಳ ಪೂರೈಸುತ ಅನುದಿನ ಪೋಷಿಸುವ,
ಪೂತಾತ್ಮ ಪೂರ್ಣ ಆನಂದ ಜ್ಞಾನಮಯ ॥ ೨೯ ॥

ಅಧಮ ಮಾನವನು ಓರ್ವ ಮಂತ್ರ–ಔಷಧಗಳನು ತಾನರಿತು,
ಪಾವಕ–ಉದಕಗಳ ಸಂಬಂಧ ವಿಲ್ಲದಲಿಪ್ಪನು ಅದರೊಳಗೆ,
ಪದುಮಜ ಅಂಡ ಉದರನು ಸರ್ವರ ಹೃದಯದೊಳಗೆ ಇರೆ,
ಕಾಲ–ಗುಣ–ಕರ್ಮದ ಕಲುಷ ಸಂಬಂಧವಾಗುವದೇ ನಿರಂಜನಗೆ ॥ ೩೦ ॥

ಒಂದು ಗುಣದೊಳು ಅನಂತ ಗುಣಗಳು, ಒಂದು ರೂಪದೊಳು ಇಹವು,
ಲೋಕಗಳ ಒಂದೆ ರೂಪದಿ ಧರಿಸಿ, ತದ್ಗತ ಪದಾರ್ಥದ ಒಳ–ಹೊರಗೆ,
ಬಾಂದಳದ ವೋಲಿದ್ದು ಬಹು ಪೆಸರಿಂದ ಕರೆಸುತ,
ಪೂರ್ಣ ಜ್ಞಾನ–ಆನಂದಮಯ, ಪರಿಪರಿ ವಿಹಾರವ ಮಾಡಿ ಮಾಡಿಸುವ ॥ ೩೧ ॥

ಎಲ್ಲರೊಳು ತಾನಿಪ್ಪ, ತನ್ನೊಳಗೆ ಎಲ್ಲರನು ಧರಿಸಿಹನು,
ಅಪ್ರತಿಮಲ್ಲ ಮನ್ಮಥಜನಕ, ಜಗದ ಆದಿ–ಅಂತ–ಮಧ್ಯಗಳ ಬಲ್ಲ,
ಬಹುಗುಣ ಭರಿತ, ದಾನವ ದಲ್ಲಣ, ಜಗನ್ನಾಥ ವಿಠಲ,
ಸೊಲ್ಲು ಲಾಲಿಸಿ ಸ್ತಂಭದಿಂದಲಿ ಬಂದ ಭಕುತನಿಗೆ ॥ ೩೨ ॥

॥ ಇತಿ ಶ್ರೀ ವ್ಯಾಪ್ತಿ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಭೋಜನ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ವನಜ–ಜ–ಅಂಡದೊಳು ಉಳ್ಳ ಅಖಿಳ ಚೇತನರು ಭುಂಜಿಪ ಚತುರವಿಧ ಭೋಜನಪದಾರ್ಥದಿ,
ಚತುರವಿಧ ರಸರೂಪ ತಾನಾಗಿ,
ಮನಕೆ ಬಂದಂತೆ ಉಂಡು ಉಣಿಸಿ, ಸಂಹನನಕೆ ಉಪಚಯು,
ಕರಣಕೆ ಆನಂದ, ಅನಿಮಿಷರಿಗೆ ಆತ್ಮ ಪ್ರದರ್ಶನ ಸುಖವನೀವ ಹರಿ ॥ ೧ ॥

ನೀಡದಂದದಲೆ ಇಪ್ಪ ಲಿಂಗಕೆ ಷೋಡಶ ಆತ್ಮಕ ರಸ ವಿಭಾಗವ ಮಾಡಿ,
ಷೋಡಶ ಕಲೆಗಳಿಗೆ ಉಪಚಯುಗಳನೆ ಕೊಡುತ,
ಕ್ರೋಡ, ಎಪ್ಪತ್ತು–ಎರಡು ಸಾವಿರ ನಾಡಿಗತ ದೇವತೆಗಳೊಳಗೆ ಇದ್ದು ಆಡುತ ಆನಂದಾತ್ಮ,
ಚರಿಸುವ ಲೋಕದೊಳು ತಾನು ॥ ೨ ॥

ವಾರಿವಾಚ್ಯನು ವಾರಿಯೊಳಗೆ ಇದ್ದು, ಆರು ರಸವೆಂದು ಎನಿಸಿ,
ಮೂವತ್ತು–ಆರು ಸಾವಿರ ಸ್ತ್ರೀ–ಪುರುಷನಾಡಿಯಲಿ ತದ್–ರೂಪ ಧಾರಕನು ತಾನಾಗಿ,
ಸರ್ವ ಶರೀರಗಳಲಿ, ಅಹಶ್ಚ–ರಾತ್ರಿ ವಿಹಾರ ಮಾಳ್ಪನು,
ಬೃಹತಿ ಯೆಂಬ ಸುನಾಮದಿಂ ಕರೆಸಿ ॥ ೩ ॥

ಆರು ರಸ ಸತ್ವಾದಿ ಭೇದದಿ ಆರು–ಮೂರಾಗಿ ಇಹವು,
ಸಾರ–ಅಸಾರ ನೀತ–(ಅ)ಪ್ರಚುರ ಖಂಡ–ಅಖಂಡ ಚಿತ್ ಪ್ರಚುರ,
ಈರು ಅಧಿಕ ಎಪ್ಪತ್ತು ಸಾವಿರ ಮಾರಮಣನ ರಸಾಖ್ಯರೂಪ,
ಶರೀರದೊಳು ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಪುದು ॥ ೪ ॥

ಕ್ಷೀರಗತ ರಸ ರೂಪಗಳು ಮುನ್ನೂರು ಮೇಲೆ ಐವತ್ತು ನಾಲಕು,
ಚಾರು ಘೃತಗತ ರೂಪಗಳು ಇಪ್ಪತ್ತರ ಒಂಭತ್ತು,
ಸಾರ ಗುಡದೊಳಗೆ ಐದು ಸಾವಿರ ನೂರ ವೊಂದು,
ಸುರೂಪ "ದ್ವಿ ಸಹಸ್ರ"–"ಅರು ಎರಡು ಶತ"–"ಪಂಚ ವಿಂಶತಿ" ರೂಪ ಫಲಗಳಲಿ ॥ ೫ ॥

ವಿಶದ-ಸ್ಥಿರ-ತೀಕ್ಷಣವು-ನಿರ್ಹರ ರಸಗಳೊಳು,
"ಮೂರು-ಐದು ಸಾವಿರ"-"ತ್ರಿ ಶತ"-ನವ ರೂಪಗಳ ಚಿಂತಿಸಿ ಭುಂಜಿಪುದು ವಿಷಯ,
ಶ್ವಸನ-ತತ್ತ್ವೇಶ ರೊಳಗೆ ಇದ್ದು, ಈ ಪೆಸರಿನಿಂದಲಿ ಕರೆಸುವನು,
ಧೇನಿಸಿದರೀ ಪರಿ, ಮನಕೆ ಪೊಳೆವನು, ಬಲ್ಲ ವಿಬುಧರಿಗೆ ॥ ೬ ॥

ಕಪಿಲ-ನರಹರಿ-ಭಾರ್ಗವ ತ್ರಯ ವಪುಷ, ನೇತ್ರದಿ-ನಾಸಿಕ-ಆಸ್ಯದಿ,
ಶಫರನಾಮಕ ಜಿಹ್ವೆಯಲಿ, ದಂತದಲಿ ಹಂಸಾಖ್ಯ,
ತ್ರಿಪದಿಪಾದ್ಯ ಹಯಾಸ್ಯ ವಾಚ್ಯದೊಳು, ಅಪರಿಮಿತ ಸುಖಪೂರ್ಣ ಸಂತತ ಕೃಪಣರೊಳಗಿದ್ದು,
ಅವರವರ ರಸ ಸ್ವೀಕರಿಸಿ ಕೊಡುವ ॥ ೭ ॥

ನಿರುಪಮ ಆನಂದಾತ್ಮ ಹರಿ, ಸಂಕರುಷಣ ಪ್ರದ್ಯುಮ್ನ ರೂಪದಿ ಇರುತಿಹನು ಭೋಕ್ತೃಗಳೊಳಗೆ,
ತತ್-ಶಕ್ತಿದನು ಯೆನಿಸಿ,
ಕರೆಸುವನು ನಾರಾಯಣ-ಅನಿರುದ್ಧ ಎರಡುನಾಮದಿ ಭೋಜ್ಯವಸ್ತು-ಗ,
ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ॥ ೮ ॥

ವಾಸುದೇವನು ಒಳ-ಹೊರಗೆ ಅವಕಾಶ ಕೊಡುವ ನಭಸ್ಥನಾಗಿ,
ರಮಾಸಮೇತ ವಿಹಾರ ಮಾಳ್ಪನು ಪಂಚರೂಪದಲಿ,
ಆ ಸರೋರುಹ ಸಂಭವ-ಭವ-ವಾಸವ ಆದಿ ಅಮರಾದಿ ಚೇತನ ರಾಶಿಯೊಳಗೆ
ಇಹನು ಎಂದು ಅರಿತವನು ಅವನೆ ಕೋವಿದನು ॥ ೯ ॥

ವಾಸುದೇವನು ಅನ್ನದೊಳು, ನಾನಾ ಸುಭಕ್ಷ್ಯದಿ ಸಂಕರುಷಣ,
ಕೃತೀಶ ಪರಮಾನ್ನದೊಳು, ಘೃತದೊಳಗೆ ಇಪ್ಪ ಅನನಿರುದ್ಧ,
ಆ ಸುಪರ್ಣ ಅಂಸಗನು ಸೂಪದಿ, ವಾಸವ ಅನುಜ ಶಾಕದೊಳು,
ಮೂಲೇಶ ನಾರಾಯಣನು ಸರ್ವತ್ರದಲಿ ನೆಲೆಸಿಹನು ॥ ೧೦ ॥

ಅಗಣಿತ ಆತ್ಮ, ಸುಭೋಜನ ಪದಾರ್ಥಗಳ ಒಳಗೆ,
ಅಖಂಡ ವಾದ ಒಂದು ಅಗಳಿನೊಳು ಅನಂತ ಅಂಶದಿಂದಲಿ ಖಂಡನೆಂದೆನಿಸಿ,
ಜಗದಿ ಜೀವರ ತೃಪ್ತಿ ಬಡಿಸುವ, ಸ್ವಗತ ಭೇದ ವಿವರ್ಜಿತನ,
ಈರ್ಬಗೆಯ ರೂಪವನರಿತು ಭುಂಜಿಸಿ ಅರ್ಪಿಸು ಅವನಡಿಗೆ ॥ ೧೧ ॥

ಈ ಪರಿಯಲಿ ಅರಿತು ಉಂಬ ನರ ನಿತ್ಯ ಉಪವಾಸಿ-ನಿರಾಮಯನು-ನಿಷ್ಪಾಪಿ-
ನಿತ್ಯ ಮಹಾ ಸುಯಜ್ಞಗಳು ಆಚರಿಸಿದವನು,
ಪೋಪದು-ಇಪ್ಪುದು-ಬಪ್ಪುದು ಎಲ್ಲ ರಮಾಪತಿಗೆ ಅಧಿಷ್ಠಾನವೆನ್ನು,
ಕೃಪಾಪಯೋನಿಧಿ ಮಾತಲಾಲಿಸುವನು ಜನನಿಯಂತೆ ॥ ೧೨ ॥

"ಆರು–ಎರಡು ಸಾವಿರದ" ಮೇಲೆ "ಇನ್ನೂರ–ಐವತ್ತು–ಒಂದು" ರೂಪದಿ
ಸಾರಭೋಕ್ತ ಅನಿರುದ್ಧ ದೇವನು ಅನ್ನಮಯನೆನಿಪ,
"ಮೂರು–ಎರಡು ವರೆ ಸಾವಿರದ" ಮೇಲೆ "ಮೂರು ಅಧಿಕ ನಾಲ್ವತ್ತು" ರೂಪದಿ
ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ॥ ೧೩ ॥

ಎರಡು ಕೋಶಗಳ ಒಳ–ಹೊರಗೆ ಸಂಕರುಷಣ "ಇದು ಸುಲಕ್ಷದ"–"ಅರವತ್ತು ಎರಡು ಸಾವಿರದ"
"ಏಳು ಅಧಿಕ ಶತ" ರೂಪಗಳ ಧರಿಸಿ ಕರೆಸಿಕೊಂಬ ಮನೋಮಯ ಎಂದು,
ಅರವಿದೂರನು "ಈರು ಎರಡು ಸಾವಿರದ"–ಮುನ್ನೂರು
ಅದ ಮೇಲೆ "ನಾಲ್ಕು ಅಧಿಕ ಎಪ್ಪತ್ತು" ॥ ೧೪ ॥ (೧೪–೧೫ ಪದ್ಯಗಲು ಜ್ಯೊತೆಯಾಗಿ ಓದಬೇಕು)

ರೂಪದಿಂ, ವಿಜ್ಞಾನ ಮಯನು ಎಂಬೀ ಪೆಸರಿನಿಂ ವಾಸುದೇವನು,
ವ್ಯಾಪಿಸಿಹ ಮಹದಾದಿ ತತ್ತ್ವದಿ ತತ್ಪತಿಗಳೊಳಗೆ,
ಈ ಪುರುಷ ನಾಮಕನ ಶುಭ ಸ್ವೇದಾಪಳು ಎನಿಸಿದ ರಮಾಂಬ,
ತಾ ಬ್ರಹ್ಮಾಪರೋಕ್ಷಿಗಳು ಆದವರ ಲಿಂಗ ಅಂಗ ಕೆಡಿಸುವಳು ॥ ೧೫ ॥

ಐದು ಸಾವಿರ–ನೂರು–ಇಪ್ಪತ್ತು–ಐದು ನಾರಾಯಣ ರೂಪವ ತಾ ಧರಿಸಿಕೊಂಡು
ಅನುದಿನದಿ ಆನಂದಮಯನೆನಿಪ,
"ಐದು ಲಕ್ಷದ"–ಮೇಲೆ–"ಎಂಭತ್ತು ಐದು ಸಾವಿರ"–"ನಾಲ್ಕು ಶತಗಳ",
ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ॥ ೧೬ ॥

ನೂರು–ವೊಂದು ಸುರೂಪದಿಂ ಶಾಂತೀರಮಣ ತಾನು ಅನ್ನನೆನಿಪ,
ಐನೂರ ಮೇಲೆ ಮೂರು ಅಧಿಕ ದಶ ಪ್ರಾಣಾಖ್ಯ ಪ್ರದ್ಯುಮ್ನ,
ತೋರುತಿಹನು ಐವತ್ತು ಐದು ವಿಕಾರ ಮನದೊಳು ಸಂಕರುಷಣ,
ಐನೂರು ಚತುರ–ಅಶೀತಿ ವಿಜ್ಞಾನಾತ್ಮ ವಿಶ್ವಾಖ್ಯ ॥ ೧೭ ॥

ಮೂರು ಸಾವಿರದ ಅರ್ಧಶತ ಮೇಲೆ ಈರು ಅಧಿಕ ರೂಪಗಳ ಧರಿಸಿ
ಶರೀರದೊಳಗೆ ಆನಂದಮಯ ನಾರಾಯಣಾಹ್ವಯನು,
ಈರು ಎರಡು ಸಾವಿರದ ಮೇಲೆ ಮುನ್ನೂರ ಐದು ಸುರೂಪದಿಂದಲಿ,
ಭಾರತೀಶನೊಳು ಇಪ್ಪ ನವನೀತಸ್ಥ ಘೃತದಂತೆ ॥ ೧೮ ॥

ಮೂರು ಅಧಿಕ ಐವತ್ತು ಪ್ರಾಣ ಶರೀರದೊಳಗೆ ಅನಿರುದ್ಧನು ಇಪ್ಪ,
ಐನೂರು ಹನ್ನೊಂದು ಅಧಿಕ ಅಪಾನನೊಳು ಇಪ್ಪ ಪ್ರದ್ಯುಮ್ನ,
ಮೂರನೇ ವ್ಯಾನ ನೊಳಗೆ ಐದರೆ ನೂರು ರೂಪದಿ ಸಂಕರುಷಣ,
ಐನೂರ ಮೂವತ್ತು ಐದು ಉದಾನನೊಳು ಇಪ್ಪ ಮಾಯೇಶ ॥ ೧೯ ॥

ಮೂಲ ನಾರಾಯಣನು ಐವತ್ತು ಏಳು ಅಧಿಕ ಐನೂರು ರೂಪವ ತಾಳಿ
ಸರ್ವತ್ರದಿ ಸಮಾನನೊಳಿಪ್ಪ ಸರ್ವಜ್ಞ,
ಲೀಲೆಗೈವನು ಸಾವಿರದ ಮೇಲೆ ಏಳು ನೂರು ಹನ್ನೊಂದು ರೂಪವ ತಾಳಿ,
ಪಂಚಪ್ರಾಣರೊಳು ಲೋಕಗಳ ಸಲಹುವನು ॥ ೨೦ ॥

ತ್ರಿ-ನವತಿ ಸುರೂಪಾತ್ಮಕ ಅನಿರುದ್ಧನು, ಸದಾ ಯಜಮಾನನಾಗಿದ್ದು,
ಅನಲ ಯಮ ಸೋಮಾದಿ ಪಿತೃದೇವತೆಗಳಿಗೆ ಅನ್ನನು ಎನಿಪನು,
ಆ ಪ್ರದ್ಯುಮ್ನ ಸಂಕರುಷಣ ವಿಭಾಗವ ಮಾಡಿಕೊಟ್ಟು ಉಂಡುಣಿಪ,
ನಿತ್ಯಾನಂದ ಭೋಜನದಾಯಿ ತುರ್ಯಾಹ್ವ ॥ ೨೧ ॥

ಷಣ್ಣವತಿ ನಾಮಕನು, ವಸು ಮೂಗಣ್ಣ ಭಾಸ್ಕರರ ಒಳಗೆ ನಿಂತು,
ಪ್ರಾಪನ್ನರು ಅನುದಿನ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ಪುಣ್ಯ ಕರ್ಮವ ಸ್ವೀಕರಿಸಿ,
ಕಾರುಣ್ಯ ಸಾಗರನು ಆ ಪಿತೃಗಳಿಗೆ
ಅಗಣ್ಯ ಸುಖವಿತ್ತು ಅವರ ಪೊರೆವನು ಎಲ್ಲ ಕಾಲದಲಿ ॥ ೨೨ ॥

ಸುತಪ ಏಕ ಉತ್ತರ ಸುಪಂಚಾಶತ ವರಣ-ಕರಣದಿ-ಚತುರ ವಿಂಶತಿ ಸುತತ್ತ್ವದಿ-
ಧಾತುಗಳೊಳು ಇದ್ದು ಅವಿರತ ಅನಿರುದ್ಧ,
ಜತನ ಮಾಳ್ಪನು ಜಗದಿ ಜೀವ ಪ್ರತತಿಗಳ,
ಷಣ್ಣವತಿ ನಾಮಕ ಚತುರ ಮೂರ್ತಿಗಳ ಅರ್ಚಿಸುವರು, ಅದರಿಂದ ಬಲ್ಲವರು ॥ ೨೩ ॥

ಅಬುಜ-ಜ ಅಂಡ ಉದರನು, ವಿಪಿನದಿ ಶಬರಿ ಯೆಂಜಲನುಂಡ, ಗೋಕುಲದ ಅಬಲೆಯರನು-
ಓಲಿಸಿದನು, ಋಷಿಪತ್ನಿಯರು ಕೊಟ್ಟನ್ನ ಸುಭುಜ ತಾ ಭುಂಜಿಸಿದ,
ಸ್ವರಮಣ, ಕುಬುಜಗಂಧಕೆ ವೊಲಿದ, ಮುನಿಗಣ ವಿಬುಧ ಸೇವಿತ,
ಬಿಡುವನೇ ನಾವು ಇತ್ತ ಕರ್ಮಫಲ ॥ ೨೪ ॥

ಗಣನೆಯಿಲ್ಲದ ಪರಮಸುಖ ಸದ್-ಗುಣ ಗಣಂಗಳ, ಲೇಶ ಲೇಶಕೆ ಎಣೆಯೆನಿಸದು
ರಮ-ಅಬ್ಜ-ಭವ-ಶಕ್ರಾದಿಗಳ ಸುಖವು,
ಉಣುತ ಉಣುತ ಮೈಮರೆದು ಕೃಷ್ಣ ಅರ್ಪಣವೆನಲು,
ಕೈಕೊಂಬನು ಅರ್ಭಕ ಜನನಿ ಭೋಜನ ಸಮಯದಲಿ ಕೈವಡ್ಡು ವಂದದಲಿ ॥ ೨೫ ॥

ಜೀವಕೃತ ಕರ್ಮಗಳ ಬಿಡದೆ ರಮಾವರನು ಸ್ವೀಕರಿಸಿ,
ಫಲಗಳನು ಈವನು ಅಧಿಕಾರಾನು ಸಾರದಲಿ ಅವರಿಗೆ ಅನವರತ,
ಪಾವಕನು ಸರ್ವಸ್ವ ಭುಂಜಿಸಿ ತಾ ವಿಕಾರವನು ಐದನು ಒಮ್ಮೆಗೆ,
ಪಾವನಕೆ ಪಾವನನೆನಿಪ ಹರಿಯುಂಬುದು ಏನರಿದು ॥ ೨೬ ॥

ಕಲುಷಜಿಹ್ವೆಗೆ ಸುಷ್ಮಭೋಜನ-ಜಲ ಮೊದಲು ವಿಷತೋರುವುದು,
ನಿಷ್ಕಲುಷ ಜಿಹ್ವೆಗೆ ಸುರಸ ತೋರುವುದು ಎಲ್ಲ ಕಾಲದಲಿ,
ಸುಲಲಿತಾಂಗಗೆ ಸಕಲ ರಸ ಮಂಗಳವೆನಿಸುತಿಹುದು,
ಅನ್ನಮಯ ಕೈಕೊಳದೆ ಬಿಡುವನೆ ಪೂತನಿಯ ವಿಷ ಮೊಲೆಯನು ಉಂಡವನು ॥ ೨೭ ॥

ಪೇಳಲಿ ಏನು ಸಮೀರ ದೇವನು ಕಾಳಕೂಟವನು ಉಂಡು ಲೋಕವ ಪಾಲಿಸಿದ,
ತದ್ದಾಸನು ಓರ್ವನು ಅಮೃತನೆನಿಸಿದನು,
ಶ್ರೀ ಲಕುಮಿವಲ್ಲಭ ಶುಭ-ಅಶುಭ ಜಾಲ ಕರ್ಮಗಳ ಉಂಬನು,
ಉಪಚಯದ ಏಳಿಗೆಗಳು ಇವಗಿಲ್ಲ ವೆಂದಿಗು, ಸ್ವರಸಗಳ ಬಿಟ್ಟು ॥ ೨೮ ॥

ಈ ಪರಿಯಲಿ ಅಚ್ಯುತನ ತತ್-ತತ್-ರೂಪ ತನ್ನಾಮಗಳ ಸಲೆ,
ನಾನಾ ಪದಾರ್ಥದಿ  ನೆನೆನೆನೆದು ಭುಂಜಿಸುತಲಿ ಇರು ವಿಷಯ,
(ವಿಷಯ) ಪ್ರಾಪಕ-ಸ್ಥಾಪಕ-ನಿಯಾಮಕ-ವ್ಯಾಪಕನು ಎಂದರಿದು,
ನೀ ನಿರ್ಲೇಪನು ಆಗಿರು, ಪುಣ್ಯ-ಪಾಪಗಳ ಅರ್ಪಿಸು ಅವನ ಅಡಿಗೆ ॥ ೨೯ ॥

ಐದು ಲಕ್ಷ ಎಂಭತ್ತರ ಒಂಭತ್ತು ಆದ ಸಾವಿರದ ಏಳುನೂರರ ಐದು ರೂಪವ ಧರಿಸಿ,
ಭೋಕ್ತೃಗ ಭೋಜ್ಯನೆಂದೆನಿಸಿ,
ಶ್ರೀ-ಧರಾ-ದುರ್ಗಾ ರಮಣ ಪಾದಾದಿ ಶಿರ ಪರ್ಯಂತ ವ್ಯಾಪಿಸಿ ಕಾದು ಕೊಂಡಿಹ,
ಸಂತತ ಜಗನ್ನಾಥ ವಿಠಲನು ॥ ೩೦ ॥

॥ ಇತಿ ಶ್ರೀ ಭೋಜನ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ವಿಭೂತಿ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀತರುಣಿ ವಲ್ಲಭನ ಪರಮ ವಿಭೂತಿ ರೂಪ ಕಂಡ ಕಂಡಲ್ಲಿ
ಈ ತೆರದಿ ಚಿಂತಿಸುತ ನೋಡು ಸಂಭ್ರಮದಿ,
ನೀತ–ಸಾಧಾರಣ–ವಿಶೇಷ–ಸಜಾತಿ–ನೈಜ–ಆಹಿತವು–ವಿಜಾತಿ–ಖಂಡ–ಅಖಂಡ
ಬಗೆಗಳನು ಅರಿತು ಬುಧರಿಂದ ॥ ೧ ॥

ಜಲ–ಧರ–ಆಗಸ ದೊಳಗೆ ಚರಿಸುವ ಹಲವು ಜೀವರ ನಿರ್ಮಿಸಿಹನು
ಅದರೊಳು ಸಜಾತಿ–ವಿಜಾತಿ–ಸಧಾರಣ–ವಿಶೇಷಗಳ ತಿಳಿದು
ತತ್–ತತ್–ಸ್ಥಾನದಲಿ ವೆಗ್ಗಳಿಸಿ,
ಹಬ್ಬಿದ ಮನದಿ ಪೂಜಿಸುತಲಿ ಅವನ ವ್ಯಾಪ್ತ ರೂಪಗಳ ನೋಡುತಲಿ ಹಿಗ್ಗುವದು ॥ ೨ ॥

ಪ್ರತಿಮೆ–ಶಾಲಗ್ರಾಮ–ಗೋ–ಅಭ್ಯಾಗತನು–ಅತಿಥಿ–ಶ್ರೀತುಲಸಿ–ಪಿಪ್ಪಲ–ಯತಿ–ವನಸ್ಥ–
ಗೃಹಸ್ಥ–ವಟು–ಯಜಮಾನ–"ಸ್ವ–ಪರ" ಜನ–
ಪೃಥಿವಿ–ಜಲ–ಶಿಖಿ–ಪವನ–ತಾರಾಪಥ–ನವಗ್ರಹ–ಯೋಗ–ಕರಣ–ಭ–
ತಿಥಿ–ಸಿತ–ಅಸಿತ–ಪಕ್ಷ–ಸಂಕ್ರಮಣ ಅವನ ಅಧಿಷ್ಠಾನ ॥ ೩ ॥

ಕಾದ ಕಾಂಚನದೊಳಗೆ ಶೋಭಿಪ ಆದಿತೇಯಾಸ್ಯನ ತೆರದಿ
ಲಕ್ಷ್ಮೀ ಧವನು ಪ್ರತಿದಿನದಿ ಶಾಲಗ್ರಾಮದೊಳಗೆ ಇಪ್ಪ,
ಐದು ಸಾವಿರ ಮೇಲೆ ಮೂವತ್ತು ಐದು ಅಧಿಕ ಐನೂರು ರೂಪದಿ,
"ಭೂ–ಧರಗಳ ಅಭಿಮಾನಿ" ದಿವಿಜರೊಳು ಇಪ್ಪನು ಅನವರತ ॥ ೪ ॥

ಶ್ರೀರಮಣ ಪ್ರತಿಮೆಗಳೊಳಗೆ "ಹದಿಮೂರು ಅಧಿಕ ವಾಗಿಪ್ಪ ಮೇಲೆ
ಐನೂರು" ರೂಪವ ಧರಿಸಿ ಇಪ್ಪನು ಆಹಿತ ಅಚಲದಿ,
ದಾರುಮಥನವ ಗೈಯ್ಯೆ ಪಾವಕ ತೋರುವಂತೆ,
ಪ್ರತೀಕ ಸುರರೊಳು ತೋರುತ ಇಪ್ಪನು, ತತ್–ತದಾ ಕಾಲದಲಿ ನೋಳ್ಪರಿಗೆ ॥ ೫ ॥

ಕರಣ ನಿಯಾಮಕನು ತಾನು ಉಪಕರಣದೊಳಗೆ "ಐವತ್ತು ಎರಡು ಸಾವಿರದ
ಹದಿನಾಲ್ಕು ಅಧಿಕ ಶತ" ರೂಪಗಳನು ಧರಿಸಿ,
ಇರುತಿಹನು ತದ್-ರೂಪ ನಾಮಗಳ ಅರಿತು ಪೂಜಿಸುತಿಹರ ಪೂಜೆಯ ನಿರುತ ಕೈಕೊಂಬ
ತೃಷಾರ್ತನು ಜಲವ ಕೊಂಬಂತೆ ॥ ೬ ॥

ಬಿಂಬರೂಪನು ಈ ತೆರದಿ "ಜಡ-ಪೊಂಬಸಿರ ಮೊದಲಾದ ಸುರರೊಳಗೆ" ಇಂಬುಗೊಂಡಿಹನೆಂದು-
ಅರಿದು, ಧರ್ಮ-ಅರ್ಥ-ಕಾಮಗಳ ಹಂಬಲಿಸದೆ ಅನುದಿನದಿ,
ವಿಶ್ವಕುಟುಂಬಿ ಕೊಟ್ಟ "ಕಣ ಅನ್ನ-ಕುತ್ಸಿತ ಕಂಬಳಿಯೆ"
ಸೌಭಾಗ್ಯವೆಂದು ಅವನ ಅಂಘ್ರಿಗಳ ಭಜಿಸು ॥ ೭ ॥

ವಾರಿಯೊಳಗೆ ಇಪ್ಪತ್ತು ನಾಲಕು, "ಮೂರು ಎರಡು ಸಾವಿರದ ಮೇಲೆ ಮುನ್ನೂರು ಹದಿನೇಳು" ಎನಿಪ
ರೂಪವು ಶ್ರೀತುಲಸಿದಳದಿ,
ನೂರು ಅರವತ್ತೊಂದು ಪುಷ್ಪದಿ, ಮೂರು ಅಧಿಕ ದಶ ದೀಪದೊಳು,
ನಾನೂರು ಮೂರು ಸುಮೂರ್ತಿಗಳು ಗಂಧದೊಳಗೆ ಇರುತಿಹವು ॥ ೮ ॥

ಅಷ್ಟದಳ ಸದ್ಹೃದಯ ಕಮಲ ಅಧಿಷ್ಠಿತನು ತಾನಾಗಿ ಸರ್ವ ಉತ್ಕೃಷ್ಟಮಹಿಮನು
ದಳಗಳಲಿ ಸಂಚರಿಸುತ ಒಳಗಿದ್ದು,
ದುಷ್ಟರಿಗೆ ದುರ್ಬುದ್ಧಿ ಕರ್ಮ, ವಿಶಿಷ್ಟರಿಗೆ ಸುಜ್ಞಾನ ಧರ್ಮ,
ಸುಪುಷ್ಟಿಗೈಸುತ ಸಂತೈಪ, ನಿರ್ದುಷ್ಟ ಸುಖಪೂರ್ಣ ॥ ೯ ॥

ವಿತ್ತ-ದೇಹ-ಆಗಾರ-ದಾರ-ಅಪತ್ಯ-ಮಿತ್ರಾದಿಗಳ ಒಳಗೆ,
ಗುಣ-ಚಿತ್ತ-ಬುದ್ಧಿ ಆದಿ ಇಂದ್ರಿಯಗಳೊಳು, ಜ್ಞಾನ-ಕರ್ಮದೊಳು,
ತತ್-ತದಾಹ್ವಯನಾಗಿ ಕರೆಸುತ, ಸತ್ಯ ಸಂಕಲ್ಪ ಅನುಸಾರದಿ,
ನಿತ್ಯದಲಿ ತಾ ಮಾಡಿ ಮಾಡಿಪನು ಎಂದು ಸ್ಮರಿಸುತಿರು ॥ ೧೦ ॥

ಭಾವ-ದ್ರವ್ಯ-ಕ್ರಿಯೆಗಳು ಎನಿಸುವ ಈ ವಿಧ ಅದ್ವೈತ ತ್ರಯಂಗಳ,
ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ,
ತಾವಕನು ತಾನೆಂದು ಪ್ರತಿದಿನ ಸೇವಿಸುವ ಭಕ್ತರಿಗೆ,
ತನ್ನನು ಈವ, ಕಾವ ಕೃಪಾಳು, ಕರಿವರಗೊಲಿದ ತೆರದಂತೆ ॥ ೧೧ ॥

ಬಾಂದಳವೆ ಮೊದಲಾದುದರೊಳು ಒಂದು-ಒಂದರಲಿ ಪೂಜಾ ಸುಸಾಧನ ವೆಂದೆನಿಸುವ,
ಪದಾರ್ಥಗಳು ಬಗೆಬಗೆಯ ನೂತನದಿ ಸಂದಣಿಸಿ ಕೊಂಡಿಹವು,
ಧ್ಯಾನಕೆ ತಂದು ಇನಿತು ಚಿಂತಿಸಿ, ಸದಾ ಗೋವಿಂದನ ಅರ್ಚಿಸಿ,
ನೋಡು, ನಲಿನಲಿದಾಡು ಕೊಂಡಾಡು ॥ ೧೨ ॥

ಜಲ–ಜ ನಾಭನ ಮೂರ್ತಿ ಮನದಲಿ ನೆಲೆಗೊಳಿಸಿ ನಿಶ್ಚಲ ಭಕುತಿಯಲಿ,
ಚಳಿ–ಬಿಸಿಲು–ಮಳೆ–ಗಾಳಿಗಳ ನಿಂದಿಸದೆ ನಿತ್ಯದಲಿ,
ನೆಲೆದೊಳಿಹ ಗಂಧವೆ ಸುಗಂಧವು, ಜಲವೆ ರಸ, ರೂಪವೆ ಸುದೀಪವು,
ಎಲರು ಚಾಮರ, ಶಬ್ದ ವಾದ್ಯಗಳು, ಅರ್ಪಿಸಲು ಒಲಿವ ॥ ೧೩ ॥

ಗೋಳಕಗಳು ರಮಾ ರಮಣನ ನಿಜ ಆಲಯಗಳು,
ಅನುದಿನದಿ ಸಂಪ್ರಕ್ಷಾಲನೆಯೆ ಸಮ್ಮಾರ್ಜನವು, ಕರಣಗಳೆ ದೀಪಗಳು,
ಸಾಲು ತತ್–ತತ್–ವಿಷಯಗಳ ಸಮ್ಮೇಳನವೆ ಪರಿಯಂಕ,
ತತ್ ಸುಖದ ಏಳಿಗೆಯೆ ಸುಪ್ಪತ್ತಿಗೆ, ಆತ್ಮನಿವೇದನವೆ ವಸನ ॥ ೧೪ ॥

ಪಾಪಕರ್ಮವು ಪಾದುಕೆಗಳ ಅನುಲೇಪನವು, ಸತ್ ಪುಣ್ಯ ಶಾಸ್ತ್ರ ಆಲಾಪನವೆ ಶ್ರೀತುಲಸಿ,
ಸು–ಮನೋವೃತ್ತಿಗಳೆ ಸುಮನ,
ಕೋಪ ಧೂಪವು, ಭಕ್ತಿ ಭೂಷಣ,
ವ್ಯಾಪಿಸಿದ ಸತ್–ಬುದ್ಧಿ ಛತ್ರವು, ದೀಪವೇ ಸುಜ್ಞಾನ, ಆರಾರ್ತಿಗಳೆ ಗುಣಕಥನ ॥ ೧೫ ॥

ಮನ–ವಚನ–ಕಾಯಿಕ ಪ್ರದಕ್ಷಿಣೆ, ಅನುದಿನದಿ, ಸರ್ವತ್ರ ವ್ಯಾಪಕ ವನರುಹೇಕ್ಷಣಗೆ
ಅರ್ಪಿಸುತ ಮೋದಿಸುತಲಿರು ಸತತ,
ಅನುಭವಕೆ ತಂದುಕೋ ಸಕಲ ಸಾಧನಗಳೊಳಗೆ ಇದೆ ಮುಖ್ಯ,
ಪಾಮರ ಮನುಜರಿಗೆ ಪೇಳಿದರೆ ತಿಳಿಯದು, ಬುಧರಿಗೆ ಅಲ್ಲದಲೆ ॥ ೧೬ ॥

ಚತುರ ವಿಧ ಪುರುಷ ಅರ್ಥ ಪಡೆವರೆ, ಚತುರದಶಲೋಕಗಳ ಮಧ್ಯದೊಳು,
ಇತರ ಉಪಾಯಗಳು ಇಲ್ಲ ನೋಡಲು ಸಕಲ ಶಾಸ್ತ್ರದಲಿ,
ಸತತ ವಿಷಯ ಇಂದ್ರಿಯಗಳಲಿ ಪ್ರವಿತತನೆನಿಸಿ ರಾಜಿಸುವ ಲಕ್ಷ್ಮೀ ಪತಿಗೆ,
ಸರ್ವ ಸಮರ್ಪಣೆಯೆ ಮಹಪೂಜೆ ಸದುಪಾಯ ॥ ೧೭ ॥

ಗೋಳಕವೆ ಕುಂಡ, ಅಗ್ನಿ ಕರಣವು, ಮೇಲೊದಗಿ ಬಹವಿಷಯ ಸಮಿಧೆಯು,
ಗಾಳಿ ಯತ್ನವು, ಕಾಮ ಧೂಮವು, ಸನ್ನಿಧಾನ ಅರ್ಚಿ,
ಮೇಳನವೆ ಪ್ರಜ್ವಾಲೆ, ಕಿಡಿಗಳು ತೂಳಿದ ಆನಂದಗಳು,
ತತ್–ತತ್–ಕಾಲ ಮಾತುಗಳು ಎಲ್ಲ ಮಂತ್ರ, ಅಧ್ಯಾತ್ಮ ಯಜ್ಞವಿದು ॥ ೧೮ ॥

ಮಧು ವಿರೋಧಿಯ ಪಟ್ಟಣಕೆ ಪೂರ್ವದ ಕವಾಟಗಳು ಅಕ್ಷಿ–ನಾಸಿಕ–ವದನ,
ಶ್ರೋತ್ರುಗಳು ಎರಡು ದಕ್ಷಿಣ ಉತ್ತರದ್ವಾರ,
ಗುದ–ಉಪಸ್ಥಗಳು ಎರಡು ಪಶ್ಚಿಮ ಕದಗಳು ಎನಿಪವು,
ಷಟ್‌ಸರೋಜವೆ ಸದನ, ಹೃದಯವೆ ಮಂಟಪ, ತ್ರಿಗುಣಂಗಳೆ ಕಲಶ ॥ ೧೯ ॥

ಧಾತುಗಳೆ ಸಪ್ತ ಆವರಣ, ಉಪವೀಧಿಗಳೆ ನಾಡಿಗಳು, ಮದಗಳು ಯೂಥಪಗಳು,
ಸುಷುಮ್ನನಾಡಿಯೆ ರಾಜಪಂಥಾನ,
ಈ ತನೂರುಹಗಳೆ ವನಂಗಳು, ಮಾತರಿಶ್ವನು ಪಂಚರೂಪದಿ
ಪಾತಕಿಗಳೆಂಬ ಅರಿಗಳನು ಸಂಹರಿಪ ತಳವಾರ ॥ ೨೦ ॥

ಇನ–ಶಶಾಂಕ ಆದಿಗಳು ಲಕ್ಷ್ಮೀವನಿತೆ ಅರಸನ ದ್ವಾರ ಪಾಲಕರೆನಿಸುತ ಇಪ್ಪರು,
ಮನದ ವೃತ್ತಿಗಳೇ ಪದಾತಿಗಳು,
ಅನುಭವಿಪ ವಿಷಯಂಗಳೆ ಪಟ್ಟಣಕೆ ಬಪ್ಪ ಪಸಾರಗಳು,
ಜೀವನೇ ಸುವರ್ತಕ, ಕಪ್ಪಗಳ ಕೈಕೊಂಬ ಹರಿ ತಾನು ॥ ೨೧ ॥

ಉರುಪರಾಕ್ರಮನ ಅರಮನಿಗೆ ದಶಕರಣಗಳೆ ಕನ್ನಡಿಯ ಸಾಲುಗಳು,
ಅರವಿದೂರನ ಸದ್ವಿಹಾರಕೆ ಚಿತ್ತ ಮಂಟಪವು,
ಮರಳಿ ಬೀಸುವ ಶ್ವಾಸಗಳು ಚಾಮರ, ವಿಲಾಸಿನಿ ಬುದ್ಧಿ,
ದಾಮೋದರಗೆ ಸಾ–ಅಷ್ಟ–ಅಂಗ ಪ್ರಣಾಮಗಳೇ ಸುಶಯನಗಳು ॥ ೨೨ ॥

ಮಾರಮಣನ ಅರಮನೆಗೆ ಸುಮಹಾ ದ್ವಾರವೆನಿಸುವ ವದನಕೆ ಒಪ್ಪುವ ತೋರಣ ಸ್ಮಶ್ರುಗಳು,
ಕೇಶಗಳೇ ಪತಾಕೆಗಳು,
ಊರಿ ನಡೆವ ಅಂಘ್ರಿಗಳು–ಜಂಘೆಗಳು–ಊರು–ಮಧ್ಯ ಉದರ–ಶಿರಗಳು
ಆಗಾರದ ಉಪ್ಪರಿಗೆಗಳು, ಕೋಶಗಳು ಐದು ಕೋಣೆಗಳು ॥ ೨೩ ॥

ಈ ಶರೀರವೆ ರಥ, ಪತಾಕ ಸುವಾಸಗಳು, ಪುಂಡ್ರಗಳು ಧ್ವಜ,
ಸಿಂಹಾಸನವು ಚಿತ್ತವು, ಸುಬುದ್ಧಿಯು ಕಲಶ, ಸನ್ಮನವು ಪಾಶ,
ಗುಣ ದಂಡತ್ರಯಗಳು, ಶುಭ–ಅಶುಭ ದ್ವಯ ಕರ್ಮ ಚಕ್ರ,
ಮಹಾ ಸಮರ್ಥ ಅಶ್ವಗಳು ದಶಕರಣಂಗಳು, ಎನಿಸುವುವು ॥ ೨೪ ॥

ಮಾತರಿಶ್ವನು ದೇಹರಥದೊಳು ಸೂತನಾಗಿಹ ಸರ್ವಕಾಲದಿ,
ಶ್ರೀತರುಣಿ ವಲ್ಲಭ ರಥಿಕನು ಎಂದರಿದು ನಿತ್ಯದಲಿ,
ಪ್ರೀತಿಯಿಂದಲಿ ಪೋಷಿಸುತ ವಾತ–ಆತಪ ಆದಿಗಳಿಂದ ಅವಿರತ,
ಈ ತನುವಿನೊಳು ಮಮತೆ ಬಿಟ್ಟವನೆ ಮಹಾಯೋಗಿ ॥ ೨೫ ॥

ಭವವೆನಿಪ ವನಧಿಯೊಳು, ಕರ್ಮ ಪ್ರವಹದೊಳು ಸಂಚರಿಸುತಿಹ ದೇಹವೆ ಸುನಾವೆಯ ಮಾಡಿ,
ತನ್ನವರಿಂದ ವಡಗೂಡಿ,
ದಿವಸ ದಿವಸಗಳಲ್ಲಿ ಲಕ್ಷ್ಮೀಧವನು ಕ್ರೀಡಿಪನು ಎಂದು ಚಿಂತಿಸೆ,
ಪವನನಯ್ಯ ಭವಾಬ್ಧಿ ದಾಟಿಸಿ ಪರಮಸುಖವ ಈವ ॥ ೨೬ ॥

ಆಪಣಾಲಯಗಳ ಪದಾರ್ಥವು, ಸ್ತ್ರೀಪುರುಷರ ಇಂದ್ರಿಯಗಳಲಿ,
ದೀಪ ಪಾವಕರೊಳಗೆ ಇಡುವ ತೈಲಾದಿ ದ್ರವ್ಯಗಳ,
ಆ ಪರಮಗೆ ಅವದಾನವು ಎಂದು ಪದೇಪದೇ ಮರೆಯದಲೆ ಸ್ಮರಿಸುತ,
ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ॥ ೨೭ ॥

ವಾರಿಜ ಭವಾಂಡವೆ ಸುಮಂಟಪ, ಮೇರುಗಿರಿ ಸಿಂಹಾಸನವು, ಭಾಗೀರಥಿಯೆ ಮಜ್ಜನವು,
ದಿಕ್ ವಸ್ತ್ರಗಳು, ನುಡಿ ಮಂತ್ರ,
ಭೂರುಹ-ಜ ಫಲಪುಷ್ಪ ಗಂಧ ಸಮೀರ, ಶಶಿ-ರವಿ ದೀಪ,
ಭೂಷಣ ತಾರಕಗಳು, ಎಂದು ಅರ್ಪಿಸಲು ಕೈಕೊಂಡು ಮನ್ನಿಸುವ ॥ ೨೮ ॥

ಭೂಸುರರೊಳು ಇಪ್ಪ ಅಬ್ಜಭವನೊಳು ವಾಸುದೇವನು,
ವಾಯು-ಖಗಪ-ಸದಾಶಿವ-ಅಹಿಪ-ಇಂದ್ರನು-ವಿವಸ್ವಾನ್ ನಾಮಕ ಸೂರ್ಯ-
ಭೇಶಕಾಮ-ಅಮರಾಸ್ಯ-ವರುಣ ಆದೀ ಸುರರು ಕ್ಷತ್ರಿಯರೊಳು ಇಪ್ಪರು
ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು ॥ ೨೯ ॥

ಮೀನ ಕೇತನ ತನಯ-ಪ್ರಾಣ-ಅಪಾನ-ವ್ಯಾನ-ಉದಾನ ಮುಖ್ಯ "ಏಕ ಊನ ಪಂಚಾಶತ್
ಮರುದ್ಗಣ"-ರುದ್ರ-ವಸುಗಣರು-
ಮೇನಕ ಆತ್ಮಜ ಕುವರ-ವಿಷ್ವಕ್ಸೇನ-ಧನಪ ಆದಿ ಅನಿಮಿಷರನು,
ಸದಾನುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ ॥ ೩೦ ॥

ಇರುತಿಹರು ನಾಸತ್ಯ-ದಸ್ರರು-ನಿರಋುತಿಯು-ಯಮಧರ್ಮ-ಕಿಂಕರರು-ಮೇದಿನಿ-
ಕಾಲಮೃತ್ಯು-ಶನೈಶ್ಚರ ಆದಿಗಳು
ಕರೆಸಿಕೊಂಬರು ಶೂದ್ರರೆಂದು ಅನವರತ,
ಶೂದ್ರರೊಳಿಪ್ಪರು ಇವರೊಳಗೆ ಅರವಿದೂರ ಅನಿರುದ್ಧನು ಇಹನೆಂದರಿದು ಮನ್ನಿಪುದು ॥ ೩೧ ॥

ವೀತಭಯ ನಾರಾಯಣ, ಚತುಷ್ಪಾತು ತಾನು ಎಂದೆನಿಸಿ,
ತತ್-ತತ್-ಜಾತಿ ಧರ್ಮ ಸುಕರ್ಮಗಳ, ತಾ ಮಾಡಿ ಮಾಡಿಸುತ,
ಚೇತನರ ಒಳಹೊರಗೆ ಓತಪ್ರೋತನಾಗಿದ್ದು ಎಲ್ಲರಿಗೆ
ಸಂಪ್ರೀತಿಯಲಿ ಧರ್ಮ-ಅರ್ಥ-ಕಾಮಾದಿಗಳ ಕೊಡುತಿಹನು ॥ ೩೨ ॥

ನಿಧನ-ಧನದ-ವಿಧಾತ-ವಿಗತಾಭ್ಯಧಿಕ-ಸಮಸಮವರ್ತಿ-ಸಾಮಗ-
ತ್ರಿದಶ ಗಣಸಂಪೂಜ್ಯ-ತ್ರಿ ಕಕುತ್ ಧಾಮ-ಶುಭನಾಮ-
ಮಧುಮಥನ-ಭೃಗುರಾಮ-ಘೋಟಕ ವದನ
ಸರ್ವ ಪದಾರ್ಥದೊಳು ತುದಿ-ಮೊದಲು ತುಂಬಿಹನು ಎಂದು ಚಿಂತಿಸು ಬಿಂಬರೂಪದಲಿ ॥ ೩೩ ॥

ಕನ್ನಡಿಯ ಕೈವಿಡಿದು ನೋಡಲು ತನ್ನ ಇರವು ಸವ್ಯ-ಅಪಸವ್ಯದಿ ಕಣ್ಣಿಗೆ ಒಪ್ಪುವ ತೆರದಿ,
ಅನಿರುದ್ಧನಿಗೆ ಈ ಜಗವು ಭಿನ್ನ ಭಿನ್ನವೆ ತೋರುತಿಪ್ಪುದು,
ಜನ್ಯ ವಾದುದರಿಂದ ಪ್ರತಿಬಿಂಬನ್ನ,
ಮಯಗಾನು ಎಂದರಿದು ಪೂಜಿಸಲು ಕೈಕೊಂಬ ॥ ೩೪ ॥

ಬಿಂಬರೆನಿಪರು ಸ್ವ ಉತ್ತಮರು, ಪ್ರತಿಬಿಂಬರೆನಿಪರು ಸ್ವ ಅವರರು,
ಪ್ರತಿಬಿಂಬ ಬಿಂಬಗಳೊಳಗೆ ಕೇವಲ ಬಿಂಬ ಹರಿಯೆಂದು,
ಸಂಭ್ರಮದಿ ಪಾಡುತಲಿ-ನೋಡುತ, ಉಂಬುದು-ಉಡುವುದು-ಇಡುವುದು-ಕೊಡುವುದು ಎಲ್ಲ
ಅಂಬುಜಾಂಬಕನ ಅಂಘ್ರಿ ಪೂಜೆಗಳು ಎಂದು ನಲಿದಾಡು ॥ ೩೫ ॥

ನದಿಯ ಜಲ ನದಿಗೆ ಎರೆವ ತೆರದಂದದಲಿ,
ಭಗವತ್-ದತ್ತ ಧರ್ಮಗಳು, ಉದಧಿಶಯನನಿಗೆ ಅರ್ಪಿಸುತ ವ್ಯಾವೃತ್ತ ನೀನಾಗಿ,
ವಿಧಿ-ನಿಷೇಧ ಆದಿಗಳಿಗೆ ಒಳಗಾಗದಲೆ ನೋಡುತ,
ದರ್ವಿಯಂದದಿ ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆವುತಿರು ॥ ೩೬ ॥

ಅರಿಯದಿರ್ದರು ಎರ್ಮ್ಮೊಳಿದ್ದು ಅನವರತ ವಿಷಯಗಳ ಉಂಬ,
ಜ್ಞಾನ ಉತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ,
ಸರಿತು ಕಾಲಪ್ರವಹಗಳು ಕಂಡರೆಯು ಸರಿ ಕಾಣದಿರೆ ಪರಿವವು,
ಮರಳಿ ಮಜ್ಜನ ಪಾನ ಕರ್ಮಗಳಿಂದ ಸುಖವಿಹವು ॥ ೩೭ ॥

ಏನು ಮಾಡುವ ಕರ್ಮಗಳು, ಲಕ್ಷ್ಮೀ ನಿವಾಸನಿಗೆ ಅರ್ಪಿಸು
ಅನುಸಂಧಾನ ಪೂರ್ವಕದಿಂದ ಸಂದೇಹಿಸದೆ ದಿನದಿನದಿ,
ಮಾನನಿಧಿ ಕೈಕೊಂಡು, ಸುಖವಿತ್ತು ಆನತರ ಸಂತೈಪ,
ತೃಣ-ಜಲ ಧೇನು ತಾನುಂಡು, ಅನವರತ ಪಾಲ್ಗರೆವ ತೆರದಂತೆ ॥ ೩೮ ॥

ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ಪಾರ್ವತೀಪತಿ-ಅಗ್ನಿ-ವಾಯು-ಸುಶಾರ್ವರೀಚರ,
ದಿಗ್ವಲಯದೊಳು ಹಂಸನಾಮಕನು,
ಸರ್ವ ಕಾಲದಿ-ಸರ್ವರೊಳು ಸುರ ಸಾರ್ವಭೌಮನು ಸ್ವೇಚ್ಛೆಯಲಿ
ಮತ್ತ ಓರ್ವರಿಗೆ ಗೋಚರಿಸದ, ಅವ್ಯಕ್ತ ಆತ್ಮನು ಎಂದೆನಿಪ ॥ ೩೯ ॥

ಪರಿ ಇಡಾವತ್ಸರನು ಸಂವತ್ಸರದೊಳು ಅನಿರುದ್ಧಾದಿ ರೂಪವ ಧರಿಸಿ,
ಬಾರ್ಹಸ್ಪತ್ಯ ಸೌರಭ ಚಾಂದ್ರಮನು ಎನಿಸಿ,
ಇರುತಿಹ ಜಗನ್ನಾಥ ವಿಠಲ ಸ್ಮರಿಸುವವರನು ಸಂತೈಪನು ಎಂದು,
ಉರುಪರಾಕ್ರಮ ಉಚಿತಸಾಧನ ಯೋಗ್ಯತೆಯನರಿತು ॥ ೪೦ ॥

॥ ಶ್ರೀಃ ॥

## ॥ ಪಂಚಮಹಾಯಜ್ಞ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಜನನಿ–ಪಿತ–ಭೂ–ವಾರಿದ–ಅಂಬರ ವೆನಿಪ ಪಂಚಾಗ್ನಿಯಲಿ
ನಾರಾಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ನೆನೆದು,
ದಿವಸಗಳು ಎಂಬ ಸಮಿಧೆಗಳನು ನಿರಂತರ ಹೋಮಿಸುತ,
ಪಾವನಕೆ ಪಾವನನು ಎನಿಪ ಪರಮನ ಬೇಡು ಪರಮಸುಖ ॥ ೧ ॥

ಗಗನ ಪಾವಕ, ಸಮಿಧೆ ರವಿ, ರಶ್ಮಿಗಳೆ ಧೂಮವು, ಅರ್ಚಿಯೆನಿಪುದು ಹಗಲು,
ನಕ್ಷತ್ರಗಳು ಕಿಡಿಗಳು, ಚಂದ್ರಮ ಅಂಗಾರ,
ಮೃಗವರ–ಉದರನೊಳಗೆ ಐದು ರೂಪಗಳ ಚಿಂತಿಸಿ,
ಭಕ್ತಿರಸ ಮಾತುಗಳೆ ಮಂತ್ರವ ಮಾಡಿ, ಹೋಮಿಸುವರು ವಿಪಶ್ಚಿತರು ॥ ೨ ॥

ಪಾವಕನು ಪರ್ಜನ್ಯ, ಸಮಿಧೆಯು ಪ್ರಾವಹೀಪತಿ, ಧೂಮಗಳು ಮೇಘಾವಳಿಗಳು,
ಅರ್ಚಿ ಕ್ಷಣಪ್ರಭೆ, ಗರ್ಜನವೆ ಕಿಡಿಯು, ಭಾವಿಸುವುದು ಅಂಗಾರ ಸಿಡಿಲೆಂದು,
ಈ ವಿಧ ಅಗ್ನಿಯೊಳು ಅಬ್ಧಿ ಜಾತನ ಕೋವಿದರು ಹೋಮಿಸುವರು ಅನುದಿನ
ಪರಮ ಭಕುತಿಯಲಿ ॥ ೩ ॥

ಧರಣಿಯೆಂಬುದೆ ಅಗ್ನಿ, ಸಂವತ್ಸರವೆ ಸಮಿಧೆ, ವಿಹಾಯಸವೆ ಪೊಗೆ,
ಇರಳು ಉರಿ, ದಿಶ ಅಂಗಾರ, ಅವಾಂತರ ದಿಗ್ವಲಯ ಕಿಡಿಯು,
ವರುಷವೆಂಬ ಆಹುತಿಗಳಿಂದಲಿ ಹರಿಯ ಮೆಚ್ಚಿಸಿ,
ಸಕಲರೊಳಗೆ ಅಧ್ವರಿಯನಾಗಿರು ಸರ್ವ ರೂಪಾತ್ಮಕನ ಚಿಂತಿಸುತ ॥ ೪ ॥

ಪುರುಷ ಶಿಖಿ, ವಾಕ್ ಸಮಿಧೆ, ಧೂಮವು ಪರಣ, ಅರ್ಚಿಯು ಜಿಹ್ವೆ, ಶ್ರೋತ್ರಗಳು ಎರಡು ಕಿಡಿಗಳು,
ಲೋಚನಗಳು ಅಂಗಾರ ವೆನಿಸುವುವು,
ನಿರುತ ಭುಂಜಿಸುವನ್ನ ಯದುಕುಲವರನಿಗೆ ಅವದಾನಗಳು ಯಂದು,
ಈ ಪರಿ ಸಮರ್ಪಣೆ ಗೈಯೆ, ಕೈಗೊಂಡು ಅನುದಿನದಿ ಪೊರೆವ ॥ ೫ ॥

ಮತ್ತೆ ಯೋಷ ಅಗ್ನಿಯೊಳು ತಿಳಿವುದು, ಉಪಸ್ಥ ತತ್ತ್ವವೆ ಸಮಿಧೆ,
ಕಾಮ ಉತ್ಪತ್ತಿ ಪರಮಾತುಗಳು ಧೂಮವು, ಯೋನಿ ಮಹದರ್ಚಿ,
ತತ್-ಪ್ರವೇಶ ಅಂಗಾರ, ಕಿಡಿಗಳು ಉತ್ಸಹಗಳು-ಉತ್ಸರ್ಜನವೆ,
ಪುರುಷೋತ್ತಮನಿಗೆ ಅವದಾನವೆನೆ ಕೈಕೊಂಡು ಮನ್ನಿಸುವ ॥ ೬ ॥

ಐದು ಅಗ್ನಿಗಳಲ್ಲಿ ಮರೆಯದೆ ಐದು ರೂಪ-ಆತ್ಮಕನ ಇಪ್ಪತ್ತು ಐದು ರೂಪಗಳ
ಅನುದಿನದಿ ನೆನೆವರಿಗೆ ಜನ್ಮಗಳ ಐದಿಸನು ನಳಿನ ಅಕ್ಷ,
ರಣದೊಳು ಮೈದುನನ ಕಾಯ್ದಂತೆ ಸಲಹುವ,
ಬೈದವಗೆ ಗತಿಯಿತ್ತ, ಭಯಹರ-ಭಕ್ತವತ್ಸಲನು ॥ ೭ ॥

ಪಂಚನಾರೀ ತುರಗದಂದದಿ ಪಂಚರೂಪ ಆತ್ಮಕನು, ತಾ ಷಟ್-ಪಂಚ ರೂಪವ ಧರಿಸಿ
ತತ್-ತನ್ನಾಮದಿಂ ಕರೆಸಿ,
ಪಂಚ ಪಾವಕ ಮುಖದಿ ಗುಣಮಯ (ಶರೀರವ) ಪಂಚ ಭೂತ-ಆತ್ಮಕ ಶರೀರವ,
ಪಂಚ ವಿಧ ಜೀವರಿಗೆ ಕೊಟ್ಟು ಅಲ್ಲಲ್ಲೆ ರಮಿಸುವನು ॥ ೮ ॥

ವಿಧಿ-ಭವಾದಿ ಸಮಸ್ತ ಜೀವರ ಹೃದಯದೊಳಗೆ ಏಕಾತ್ಮ ನೆನಿಸುವ ಪದುಮನಾಭನು,
ಅಚ್ಯುತ-ಅನಂತ ಆದಿರೂಪದಲಿ,
ಅಧಿಸುಭೂತ-ಅಧ್ಯಾತ್ಮವ-ಅಧಿದೈವದೊಳು ಕರೆಸುವ,
ಪ್ರಾಣ-ನಾಗಾಭಿದನು ದಶರೂಪದಲಿ ದಶವಿಧ ಪ್ರಾಣರೊಳಗೆ ಇದ್ದು ॥ ೯ ॥

"ಈರು ಐದು ಸಾವಿರದ-ಇಪ್ಪತ್ತು ಆರಧಿಕ-ಮುನ್ನೂರು" ರೂಪಗಳ
ಈರು ಎರಡು ಸ್ಥಾನದಲಿ ಚಿಂತಿಪುದು ಅನುದಿನದಿ ಬುಧರು,
"ನೂರು ಇಪ್ಪತ್ತೇಳು ಅಧಿಕ-ಮೂರಾರು ಸಾವಿರ" ರೂಪದಿಂ
ದಶ ಮಾರುತರೊಳಿದ್ದು ಅವರವರ ಪೆಸರಿಂದ ಕರೆಸುವನು ॥ ೧೦ ॥

ಚಿತ್ತೈಸುವುದು "ಎಂಟು ಅಧಿಕ ಇಪ್ಪತ್ತು ಸಾವಿರ-ನಾಲ್ಕು ಶತದ-ಇವತ್ತು ಮೂರು" ಸುಮೂರ್ತಿಗಳು
ಅಹವಲ್ಲೆ ಪರಿಯಂತ,
ಹತ್ತು ನಾಲಕು ರೂಪಗಳ, ನೆರೆಬಿತ್ತರವ ಯೀಪರಿ ತಿಳಿದು,
ಪುರುಷೋತ್ತಮನ ಸರ್ವತ್ರ ಪೂಜೆಯ ಮಾಡು ಕೊಂಡಾಡು ॥ ೧೧ ॥

"ಈರು ಎರಡು ಶತ-ದ್ವಿ ಅಷ್ಟ ಅಧಿಕ-ಹದಿನಾರು ಸಾವಿರ" ರೂಪ ಸರ್ವ ಶರೀರದೊಳು
ಶಬ್ದಾದಿಗಳ ಅಧಿಷ್ಠಾನದೊಳಗೆ ಇಪ್ಪ,
ಮಾರುತನು ನಾಗಾದಿ ರೂಪದಿ,
ಮೂರನೇ ಗುಣಮಾನಿ ಶ್ರೀ ದುರ್ಗಾರಮಣ, ವಿದ್ಯಾಕುಮೋಹವ ಕೊಡುವ ಕರಣಕ್ಕೆ ॥ ೧೨ ॥

ಐದವಿದ್ಯೆಗಳೊಳಗೆ ಇಹ ನಾಗಾದಿಗಳ ಅಧಿಷ್ಠಾನದಲಿ ಲಕ್ಷ್ಮೀಧವನು
ಕೃದ್ಧೋಲ್ಕ ಮೊದಲಾದ ಐದು ರೂಪಗಳ ತಾ ಧರಿಸಿ,
ಸಜ್ಜನರ ಅವಿದ್ಯವ ಭೇದಿಸುವ, ತಾಮಸರಿಗೆ ಅಜ್ಞಾನಾದಿಗಳ ಕೊಟ್ಟು,
ಅವರವರ ಸಾಧನವ ಮಾಡಿಸುವ ॥ ೧೩ ॥

ಗೋವುಗಳೊಳು ಉದ್ಗೀಥನಿಹ, ಪ್ರಸ್ಥಾವ–ಹಿಂಕಾರ ಎರಡು ರೂಪದಿ ಆವಿ–ಅಜ ಗಳೊಳಿಹನು,
ಪ್ರತಿಹಾರಾಹ್ವ ಹಯಗಳೊಳು,
ಜೀವನಪ್ರದ ನಿಧನ ಮನುಜರೊಳು, ಈ ವಿಧದೊಳಿಹ ಪಂಚ ಸಾಮವ,
ಝಾವ ಝಾವಕೆ ನೆನೆವರಿಗೆ ಐದಿಸನು ಜನ್ಮಗಳ ॥ ೧೪ ॥

ಯುಗ ಚತುಷ್ಟಯಗಳಲಿ ತಾನಿದ್ದು, ಯುಗ ಪ್ರವರ್ತಕ ಧರ್ಮ ಕರ್ಮಗಳಿಗೆ ಪ್ರವರ್ತಕ,
ವಾಸುದೇವ ಆದೀ ಈರು–ಎರಡು ರೂಪ ತೆಗೆದು ಕೊಂಡು,
ಯುಗಾದಿ ಕೃತು ತಾ ಯುಗ ಪ್ರವರ್ತಕ ಯೆನಿಸಿ,
ಧರ್ಮ ಪ್ರಘಟಕನು ತಾನಾಗಿ, ಭಕುತರಿಗೀವ ಸಂಪದವ  ॥ ೧೫ ॥

ತಲೆಯೊಳಿಹ ನಾರಾಯಣನು, ಗಂಟಲಡಿ ಒಡಲೊಳು ವಾಸುದೇವನು,
ಬಲದಲಿಹ ಪ್ರದ್ಯುಮ್ನ, ಎಡ ಭಾಗದಲಿ ಅನಿರುದ್ಧ,
ಕೆಳಗಿನ ಅಂಗದಿ ಸಂಕರುಷಣನ ತಿಳಿದು,
ಈ ಪರಿ ಸಕಲ ದೇಹಗಳೊಳಗೆ ಪಂಚಾತ್ಮಕನ ರೂಪವ ನೋಡು ಕೊಂಡಾಡು ॥ ೧೬ ॥

ತನು ವಿಶಿಷ್ಟದಿ ಇಪ್ಪ ನಾರಾಯಣನು, ಕಟಿ–ಪಾದ ಅಂತ ಸಂಕರುಷಣನು,
ಶಿರ–ಜಘನ ಅಂತ ವಾಗಿಹ ವಾಸುದೇವಾಖ್ಯ,
ಅನಿಮಿಷ ಈಷ ಅನಿರುದ್ಧ–ಪ್ರದ್ಯುಮ್ನನು ಎಡದಿ–ಬಲ ಭಾಗದಿ,
ಚಿಂತನೆಯ ಮಾಳ್ಪರಿಗೆ ಉಂಟೆ ವ್ಯೆಲಿಗೆ ವಿಧಿ–ನಿಷೇಧಗಳು ॥ ೧೭ ॥

ಪದುಮನಾಭನು ಪಾಣಿಯೊಳಗಿಹ, ವದನದಲಿ ಹೃಶೀಕೇಶ,
ನಾಸಿಕ ಸದನದಲಿ ಶ್ರೀಧರನು, ಜಿಹ್ವೆಯೊಳು ಇಪ್ಪ ವಾಮನನು,
ವಿದಿತ ನೇತ್ರದಿ ತ್ರಿವಿಕ್ರಮನು, ಮಧುಹ ತ್ವಕ್–ದೇಶದೊಳಗಿಹ,
ಕರ್ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ॥ ೧೮ ॥

ಮನದೊಳಿಹ ಗೋವಿಂದ, ಮಾಧವ ಧನಪ ಸಖ ತತ್ವದೊಳು,
ನಾರಾಯಣ ಮಹತ್–ತತ್ವದೊಳು, ಅವ್ಯಕ್ತದೊಳು ಕೇಶವನು,
ಇನಿತು ರೂಪವ ದೇಹದೊಳು ಚಿಂತನೆಯ ಗೈವ ಮಹಾತ್ಮರು,
ಇಳೆಯೊಳು ಮನುಜರು ಅವರಲ್ಲ ಅಮರರೇ ಸರಿ ಹರಿಕೃಪಾಬಲದಿ ॥ ೧೯ ॥

ನೆಲದೊಳು ಇಪ್ಪನು ಕೃಷ್ಣ ರೂಪದಿ, ಜಲದೊಳು ಇಪ್ಪನು ಹರಿಯೆನಿಸಿ,
ಶಿಖಿಯೊಳಗೆ ಇಪ್ಪನು ಪರಶುರಾಮ ಉಪೇಂದ್ರನು ಎಂದೆನಿಸಿ, ಎಲರೊಳು ಇಪ್ಪನು ಜನಾರ್ದನನು,
ಬಾಂದಳದೊಳು ಅಚ್ಯುತ, ಗಂಧ ನರಹರಿ,
ಪೊಳೆವ ಅಧೋಕ್ಷಜ ರಸಗಳೊಳು ರಸರೂಪ ತಾನಾಗಿ ॥ ೨೦ ॥

ರೂಪ ಪುರುಷೋತ್ತಮನು, ಸ್ಪರ್ಶ ಪ್ರಾಪಕನು ಅನಿರುದ್ಧ,
ಶಬ್ದದಿ ವ್ಯಾಪಿಸಿಹ ಪ್ರದ್ಯುಮ್ನ, ಉಪಸ್ಥದಿ ವಾಸುದೇವನಿಹ,
ತಾ ಪೊಳೆವ ಪಾಯುಸ್ಥನಾಗಿ ಜಯಾಪತಿಯು ಸಂಕರುಷಣನು,
ಸುಸ್ಥಾಪಕನೆನಿಸಿ ಪಾದದೊಳು ದಾಮೋದರನು ಪೊಳೆವ ॥ ೨೧ ॥

ಚತುರ ವಿಂಶತಿ ತತ್ತ್ವದೊಳು, ಶ್ರೀಪತಿಯೆ ಅನಿರುದ್ಧಾದಿ ರೂಪದಿ,
ವಿದಿತನಾಗಿದ್ದು ಅಖಿಲ ಜೀವರ ಸಂಹನನ ದೊಳಗೆ,
ಪ್ರತತಿ ಯಂದದಿ ಸುತ್ತು-ಸುತ್ತುತ, ಪಿತೃಗಳಿಗೆ ತರ್ಪಕ ನೆನಿಸಿಕೊಂಡು
ಅತುಳ ಮಹಿಮನು ಷಣ್ಣವತಿ ನಾಮದಲಿ ನೆಲೆಸಿಹನು ॥ ೨೨ ॥

ಚತುರ ವಿಂಶತಿ ತತ್ತ್ವದೊಳು ತತ್-ಪತಿಗಳೆನಿಸುವ ಬ್ರಹ್ಮ ಮುಖ ದೇವತೆಗಳೊಳು,
"ಹನ್ನೊಂದು ನೂರು-ಐವತ್ತು ಎರಡು" ರೂಪ,
ವಿತತನಾಗಿದ್ದೆಲ್ಲ ಜೀವರ ಜತನ ಮಾಡುವ ಗೋಸುಗ,
ಜಗತ್-ಪತಿಗೆ ಏನಾದರು ಪ್ರಯೋಜನವು ಇಲ್ಲ ವಿದರಿಂದ ॥ ೨೩ ॥

ಇಂದಿರಾಧವ, ಶಕ್ತಿ ಮೊದಲಾದ "ಒಂದು ಅಧಿಕ ದಶ" ರೂಪದಿಂದಲಿ
ಪೊಂದಿಹನು ಸಕಲ ಇಂದ್ರಿಯಗಳಲಿ ಪುರುಷನಾಮಕನು,
ಸುಂದರಪ್ರದ, ಪೂರ್ಣಜ್ಞಾನ-ಆನಂದಮಯ,
ಚಿತ್-ದೇಹದೊಳು ತಾನು ಒಂದು ಅರಕ್ಷಣ ವಗಲದಲೆ, ಪರಮಾಪ್ತನು ಆಗಿಪ್ಪ ॥ ೨೪ ॥

"ಆರಧಿಕ ದಶ" ರೂಪದಿಂದಲಿ ತೋರುತ ಇಪ್ಪನು ವಿಶ್ವ,
ಲಿಂಗಶರೀರದೊಳು ತೈಜಸನು ಪ್ರಾಜ್ಞನು ತುರ್ಯನಾಮಕನು,
"ಮೂರು ಐದು" ರೂಪಗಳ ಧರಿಸುತಲಿ, ಈರು ಐದು ಕರಣದೊಳು ಮಾತ್ರದಿ
ಖ-ಈರ-ಶಿಖಿ-ಜಲ-ಭೂಮಿಯೊಳಗಿಹನು ಆತ್ಮನಾಮದಲಿ ॥ ೨೫ ॥

ಮನದೊಳು ಆಹಂಕಾರದೊಳು ಚಿಂತನೆಯ ಮಾಳ್ಪುದು ಅಂತರಾತ್ಮನ, ।
ಘನ ಸು-ತತ್ತ್ವದಿ ಪರಮನ, ಅವ್ಯಕ್ತದಲಿ ಜ್ಞಾನಾತ್ಮ,
ಇನಿತು ಪಂಚಾಶಯ್-ವರಣ ವೇದ್ಯನ ಅಜಾದ್ಯೈವತ್ತು ಮೂರ್ತಿಗಳನು,
ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥ ೨೬ ॥

ಚತುರವಿಂಶತಿ ತತ್ತ್ವದೊಳು, ತತ್-ಪತಿಗಳೆನಿಸುವ ಬ್ರಹ್ಮಮುಖ ದೇವತೆಗಳೊಳು,
"ಹದಿಮೂರು ಸಾವಿರದ-ಎಂಟು ನೂರು-ಅಧಿಕ-ಚತುರ ವಿಂಶತಿ" ರೂಪದಿಂದಲಿ,
ವಿತತನಾಗಿದ್ದು ಎಲ್ಲರೊಳು,
ಪ್ರಾಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು ॥ ೨೭ ॥

ಕೇಶವಾದಿ ಸುಮೂರ್ತಿ ದ್ವಾದಶ ಮಾಸ-ಪುಂಡ್ರಗಳಲ್ಲಿ,
ವೇದವ್ಯಾಸ ಅನಿರುದ್ಧಾದಿ ರೂಪಗಳು ಆರು ಋತುಗಳಲಿ,
ವಾಸವಾಗಿಹನೆಂದು ತ್ರಿಂಶತಿ ವಾಸರದಿ, ಸತ್ಕರ್ಮ ಧರ್ಮ ನಿರಾಶೆಯಿಂದಲಿ ಮಾಡು,
ಕರುಣವ ಬೇಡು ಕೊಂಡಾಡು ॥ ೨೮ ॥

ಲೋಷ್ಠ-ಕಾಂಚನ-ಲೋಹ-ಶೈಲಜ-ಕಾಷ್ಟ ಮೊದಲಾದ ಅಖಿಳ ಜಡ,
ಪರಮೇಷ್ಟಿ ಮೊದಲಾದ ಅಖಿಳ ಚೇತನರೊಳಗೆ ಅನುದಿನವು,
ಚೇಷ್ಟೆಗಳ ಮಾಡಿಸುತ ತಿಳಿಸದೆ, ಪ್ರೇಷ್ಠನಾಗಿದ್ದು ಎಲ್ಲರಿಗೆ,
ಸರ್ವೇಷ್ಟ ಅದಾಯಕ ಸಂತೈಸುವನು ಸರ್ವ ಜೀವರನು ॥ ೨೯ ॥

ವಾಸುದೇವ-ಅನಿರುದ್ಧ ರೂಪದಿ ಪುಂ ಶರೀರದೊಳಿಹನು ಸರ್ವದ,
ಸ್ತ್ರೀ ಶರೀರದೊಳಿಹನು ಸಂಕರುಷಣನು-ಪ್ರದ್ಯುಮ್ನ,
"ದ್ವಾಸುಪರ್ಣ" ಶ್ರುತಿ ವಿನುತ ಸರ್ವಾ-ಸುನಿಲಯ ನಾರಾಯಣನ,
ಸದ್-ಉಪಾಸನೆಯ ಗೈವವರು ಜೀವನ್ಮುಕ್ತರು ಎನಿಸುವರು ॥ ೩೦ ॥

ತನ್ನ ಅನಂತ ಅನಂತ ರೂಪ ಹಿರಣ್ಯ ಗರ್ಭ ಆದಿಗಳೊಳಗೆ
ಕಾರುಣ್ಯ ಸಾಗರ ಹರಹಿ, ಅವರವರ ಅಖಿಳ ವ್ಯಾಪಾರ,
ಬನ್ನಬಡದಲೆ ಮಾಡಿ ಮಾಡಿಸಿ, ಧನ್ಯರು ಎನಿಸಿ,
ಸಮಸ್ತ ದಿವಿಜರ ಪುಣ್ಯಕರ್ಮವ ಸ್ವೀಕರಿಸಿ ಸುಖವಿತ್ತು ಪಾಲಿಸುವ ॥ ೩೧ ॥

ಸಾಗರದೊಳಿಹ ನದಿಯ ಜಲ ಭೇದ ಆಗಸದೊಳು ಇಪ್ಪ ಅಬ್ದ ಬಲ್ಲವು,
ಕಾಗೆ ಗುಬ್ಬಿಗಳು ಅರಿಯ ಬಲ್ಲವೆ ನದಿಯ ಜಲಸ್ಥಿತಿಯ,
ಭೋಗಿವರ ಪರಿಯಂಕ ಶಯನನೊಳು ಈ ಗುಣತ್ರಯ ಬದ್ಧ ಜಗವಿಹುದು,
ಆಗಮಜ್ಞರು ತಿಳಿವರು, ಅಜ್ಞಾನಿಗಳಿಗೆ ಅಳವಡದು ॥ ೩೨ ॥

ಕರಣ-ಗುಣ-ಭೂತಗಳೊಳಗೆ ತದ್ವರನೆನಿಪ ಬ್ರಹ್ಮಾದಿ ದಿವಿಜರೊಳು ಅರಿತು,
ರೂಪ ಚತುಷ್ಟಯಗಳ ಅನುದಿನದಿ ಸರ್ವತ್ರ ಸ್ಮರಿಸುತ-ಅನುಮೋದಿಸುತ-ಹಿಗ್ಗುತ-
ಪರವಶದಿ ಪಾಡುವರಿಗೆ, ತನ್ನಿರವ ತೋರಿಸಿ,
ಭವವಿಮುಕ್ತರ ಮಾಡಿ ಪೋಷಿಸುವ ॥ ೩೩ ॥

ಮೂಲರೂಪನು ಮನದೊಳಿಹ, ಶ್ರವಣ ಆಲಿಯೊಳಗಿಹ ಮತ್ಸ್ಯ,
ಕೂರ್ಮನು ಕೋಲರೂಪನು ತ್ವಕ್, ರಸನದೊಳಗೆ ಇಪ್ಪ ನರಸಿಂಹ,
ಬಾಲವಟು ವಾಮನನು ನಾಸಿಕ ನಾಳದೊಳು, ವದನದಲಿ ಭಾರ್ಗವ, ।
ವಾಲಿಭಂಜನ ಹಸ್ತದೊಳು, ಪಾದ ಶ್ರೀಕೃಷ್ಣ ॥ ೩೪ ॥

ಜಿನ ವಿಮೋಹಕ ಬುದ್ಧ ಪಾಯುಗ, ದನುಜ ಭಂಜನ ಕಲ್ಕಿ ಮೇಢ್ರದಿ,
ಇನಿತು ದಶ ರೂಪಗಳ ದಶ ಕರಣಂಗಳಲಿ ತಿಳಿದು,
ಅನುಭವಿಪ ವಿಷಯಂಗಳು ಕೃಷ್ಣ ಅರ್ಪಣವೆನಲು ಕೈಕೊಂಬ,
ವೃಜಿನ ಅರ್ದನ ವರ ಜಗನ್ನಾಥ ವಿಠಲ ವಿಶ್ವ ವ್ಯಾಪಕನು ॥ ೩೫ ॥

॥ ಇತಿ ಶ್ರೀ ಪಂಚಮಹಾಯಜ್ಞ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಇತಿ ಪಂಚತನ್ಮಾತ್ರ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಭೂ–ಸಲಿಲ–ಶಿಖಿ–ಪವನ–ಭೂತ ಆಕಾಶ ದೊಳಗೆ ಐದು–ಐದು ತನ್ಮಾತ್ರಾ ಸಹಿತ
"ಒಂದು ಅಧಿಕ ಪಂಚಾಶತ್" ವರಣ ವೇದ್ಯ,
ಈ ಶರೀರದಿ ವ್ಯಾಪಿಸಿದ್ದು ಸುರ–ಅಸುರರಿಗೆ ನಿರಂತರದಲಿ,
ಸುಖ–ಅಸುಖ ಪ್ರದನಾಗಿ ಆಡುವ ದ್ವೇಷಿಪರ ಬಡಿವ ॥ ೧ ॥

ಪ್ರಣವ ಪ್ರತಿಪಾದ್ಯ ತ್ರಿ–ನಾಮದಿ ತನುವಿನೊಳು ತ್ರಿ–ಸ್ಥಾನಗ ಅನಿರುದ್ಧನು
ತ್ರಿ–ಪಂಚಕ ಏಕ–ವಿಂಶತಿ ಚತುರ–ವಿಂಶತಿಗನು ಎನಿಸಿ,
ಎಪ್ಪತ್ತು ಎರಡು ಸಾವಿರ ಇನಿತು ನಾಡಿಗಳೊಳು ನಿಯಾಮಿಸುತ ಇನ ಭಸ್ತಿಗ
ಲೋಕದೊಳು ಸರ್ವತ್ರ ಬೆಳಗುವವನು ॥ ೨ ॥

ಜೀವ–ಲಿಂಗ–ಅನಿರುದ್ಧ–ಸ್ಥೂಲ ಕಳೇವರಗಳಲಿ
ವಿಶ್ವ–ತುರಗ ಗ್ರೀವ–ಮೂಲೇಶ ಅಚ್ಯುತ ತ್ರಯ–ಹಂಸ ಮೂರ್ತಿಗಳ,
ಈ ವಿಧ ಚತು: ಸ್ಥಾನದಲಿ ಶಾಂತೀವರನ ಈರು ಎರಡು ರೂಪದಿ ಭಾವಿಸುವುದು–
ಏಕ ಊನ ವಿಂಶತಿ ಮೂರ್ತಿ ಸರ್ವತ್ರ ॥ ೩ ॥

ಕಲುಷ ವಿಲ್ಲದ ದರ್ಪಣದಿ ಪ್ರತಿ ಫಲಿಸಿ ಸರ್ವ ಪದಾರ್ಥಗಳು ಕಂಗೊಳಿಸುವಂದದಲಿ
ಬಿಂಬ ಜಡ–ಚೇತನಗಳೊಳಗೆ ಇದ್ದು,
ಪೊಳೆವ ಬಹುರೂಪದಲಿ ಸಜ್ಜನರೊಳಗೆ ಮನದರ್ಪಣದಿ, ತಾ
ನಿಶ್ಚಲ–ನಿರಾಮಯ–ನಿರ್ವಿಕಾರ–ನಿರಾಶ್ರಯಾನಂತ ॥ ೪ ॥

ಈ ಶರೀರ ಚತುಷ್ಟಯಗಳೊಳು ಕೋಶ–ಧಾತು–ಗ ಭಾರತಿಪ ಪ್ರಾಣೇಶನು
ಇಪ್ಪತ್ತು ಒಂದು ಸಾವಿರದ ಆರುನೂರೆನಿಪ ಶ್ವಾಸ ರೂಪಕ ಹಂಸ,
ಭಾಸ್ಕರ–ಭೇಶರ ಒಳಗಿದ್ದು ಅವರ ಕೈವಿಡಿದು
ಈ ಸರೋಜ ಭವ ಅಂಡದೊಳು ಸರ್ವತ್ರ ತುಂಬಿಹನು ॥ ೫ ॥

ಶಿರಗಳು ಐದು, ಐದು-ಎರಡು ಬಾಹುಗಳು, ಎರಡು ಪಾದಗಳು,
ಒಂದು ಮಧ್ಯ ಉದರದಿ ಶೋಭಿಪ, ವಾ~ಕ್-ಮನೋಮಯನೆನಿಸಿ ನಿತ್ಯದಲಿ,
ಕರಣ-ಧಾತುಗಳಲ್ಲಿ "ಎಪ್ಪತ್ತು ಎರಡು" ಸಾವಿರ ನಾಡಿಗಳಲಿ ಇಪ್ಪ,
ಅರವಿದೂರನು ಭಾರತ ಪ್ರತಿಪಾದ್ಯನು ಎಂದೆನಿಸಿ ॥ ೬ ॥

ಈರು ಎರಡು ದೇಹ ಊರ್ಮಿ ಭೂತಗಳು ಆರು ಅಧಿಕ ದಶ, ಋಗ್ವಿನುತ
ಲಕ್ಷ್ಮೀರಮಣ, ವಿಷ್ಣ್ವಾಖ್ಯ ರೂಪದಿ, ಚತು-ಷಷ್ಠಿ ಕಲಾಧಾರಕನು ತಾನಾಗಿ,
ಬ್ರಹ್ಮ-ಪುರಾರಿ ಮುಖ್ಯರೊಳು ಇದ್ದು, ಸತತ ವಿಹಾರ ಮಾಳ್ಪನು,
ಚತುಷ್ ಪಾದ ಆಹ್ವಯದಿ ಲೋಕದೊಳು ॥ ೭ ॥

ತೃಣ ಮೊದಲು ಬ್ರಹ್ಮ ಅಂತ ಜೀವರ ತನುಗಳ ತ್ರಯಗಳಲಿ,
ನಾರಾಯಣನ "ಸಾವಿರದ-ಐದು ನೂರು-ಇಪ್ಪತ್ತು ಮೇಲೆ ಆರು"
ಗಣನೆ ಮಾಳ್ಪುದು ಬುಧರು ರೂಪವ,
ಘೃಣಿ: ಸೂರ್ಯ ಆದಿತ್ಯ ನಾಮಗಳು ಅನುದಿನದಿ ಜಪಿಸುವರಿಗೆ ಈವ ಆರೋಗ್ಯ ಸಂಪದವ ॥ ೮ ॥

ಐದು ನೂರು ಎಪ್ಪತ್ತು ನಾಲಕು ಆಧಿಭೌತಿಕದಲ್ಲಿ ತಿಳಿವುದು,
ಐದು ಎರಡು ಶತ ಏಕ ವಿಂಶತಿ ರೂಪವು ಅಧ್ಯಾತ್ಮ,
ಭೇದಗಳು ಇನ್ನೂರು ಮೂವತ್ತಾದ ಮೇಲೆ ಒಂದಧಿಕ ಮೂರ್ತಿಗಳು
ಆದರದಲಿ ಅಧಿದೈವದೊಳು ಚಿಂತಿಪುದು ಭೂಸುರರು ॥ ೯ ॥

ಸುರುಚಿ-ಶಾರ್ವರೀಕರನು ಎನಿಸಿ ಸಂಕರುಷಣ-ಪ್ರದ್ಯುಮ್ನ
ಶಶಿ-ಭಾಸ್ಕರರ ಒಳಗೆ "ಅರವತ್ತು ಅಧಿಕ ಮುನ್ನೂರು" ರೂಪದಲಿ ಕರೆಸಿಕೊಂಬನು
ಅಹ: ಸಂವತ್ಸರ ನೆನಿಪನು, ವಿಶಿಷ್ಟ ನಾಮದಲಿ ಅರಿತವರಿಗೆ
ಆರೋಗ್ಯ ಭಾಗ್ಯವನು ಈವ ಆನಂದಮಯ ॥ ೧೦ ॥

ಏಕ ಪಂಚಾಶತ್ ವರಣ ಗತ ಮಾಕಳತ್ರನು ಸರ್ವರೊಳಗ ।
ಅವ್ಯಾಕೃತ ಆಕಾಶ ಅಂತ ವ್ಯಾಪಿಸಿ, ನಿಗಮತತಿಗಳನು ವ್ಯಾಕರಣ ಭಾರತ
ಮುಖ ಆದಿ ಅನೇಕ ಶಾಸ್ತ್ರ ಪುರಾಣ ಭಾಷ್ಯ ಅನೀಕಗಳ ಕಲ್ಪಿಸಿ
ಮನೋ-ವಾಙ್ಮಯ ನೆನಿಸಿಕೊಂಬ ॥ ೧೧ ॥

ಭಾರ ಭೃತ್ ನಾಮಕನ "ಸಾವಿರದ-ಆರು ನೂರು-ಇಪ್ಪತ್ತು ನಾಲಕು" ಮೂರುತಿಗಳು
ಚರ-ಅಚರದಿ ಸರ್ವತ್ರ ತುಂಬಿಹವು,
ಆರು ನಾಲಕು ಜಡಗಳಲಿ-ಹದಿನಾರು ಚೇತನಗಳಲಿ ಚಿಂತಿಸೆ, ।
ತೋರಿಕೊಂಬನು ತನ್ನ ರೂಪವ ಸಕಲ ಠಾವಿನಲಿ ॥ ೧೨ ॥

ಮಿಸುಣಿ ಮೇಲಿಹ ಮಣಿಯುವ್ಪೋಲ್, ರಾಜಿಸುವ ಬ್ರಹ್ಮಾದಿಗಳ ಮನದಲಿ, ।
ಬಿಸಿಜ-ಜ ಅಂಡ ಅಧಾರಕನು ಆಧೇಯು ನೆಂದೆನಿಸಿ,
"ದ್ವಿ ಶತ ನಾಲ್ವತ್ತು ಎರಡು" ರೂಪದಿ ಶಶಿಯೊಳು ಇಪ್ಪನು,
ಶಶದೊಳಗೆ ಶೋಭಿಸುವ "ನಾಲ್ವತ್ತು ಎರಡು ಅಧಿಕ ಶತ" ರೂಪದಲಿ ಬಿಡದೆ ॥ ೧೩ ॥

"ಎರಡು ಸಾವಿರದ ಎಂಟು" ರೂಪವ ನರಿತು ಸರ್ವ ಪದಾರ್ಥದಲಿ
ಶ್ರೀ ವರನ ಪೂಜೆಯುಮಾಡು ವರಗಳ ಬೇಡು ಕೊಂಡಾಡು,
ಬರಿದೆ ಜಲದೊಳು ಮುಳುಗಿ, ಬಿಸಿಲೊಳು ಬೆರಳನು ಎಣಿಸಿದರೇನು,
ಸದ್ಗುರು-ಹಿರಿಯರ ಅನುಸರಿಸಿ, ಇದರ ಮರ್ಮವನು ಅರಿಯದಿಹ ನರನು ॥ ೧೪ ॥

ಮತ್ತೆ ಚಿತ್-ದೇಹದ ಒಳಗೆ "ಎಂಭತ್ತು ಸಾವಿರದ-ಏಳು ನೂರು-ಇಪ್ಪತ್ತು ಐದು"
ನರಸಿಂಹ ರೂಪದಲಿ ಇದ್ದು,
ಜೀವರಿಗೆ ನಿತ್ಯದಲಿ ಹಗಲು ಇರಳು ಬಪ್ಪ ಅಪಮೃತ್ಯುವಿಗೆ ತಾ ಮೃತ್ಯುವೆನಿಸುವ,
ಭೃತ್ಯ-ವತ್ಸಲ ಭಯವಿ-ನಾಶನ ಭಾಗ್ಯ-ಸಂಪನ್ನ ॥ ೧೫ ॥

ಜ್ವರನೊಳು ಇಪ್ಪತ್ತೇಳು, ಹರನೊಳಗೆ ಇರುವನು ಇಪ್ಪತ್ತೆಂಟು ರೂಪದಿ,
"ಎರಡು ಸಾವಿರದ-ಎಂಟು ನೂರು-ಇಪ್ಪತ್ತು ಏಳು ಅಧಿಕ" ಜ್ವರಹರ ಆಹ್ವಯ
ನಾರಸಿಂಹನ ಸ್ಮರಣೆಮಾತ್ರದಿ ದುರಿತ ರಾಶಿಗಳು ಇರದೆ ಪೋಪವು,
ತರಣಿ ಬಿಂಬವ ಕಂಡ ಹಿಮದಂತೆ ॥ ೧೬ ॥

ಮಾಸ ಪರಿಯಂತರವು ಬಿಡದೆ ನೃಕೇಸರಿಯ ಶುಭನಾಮ ಮಂತ್ರ
ಜಿತ ಆಸನದಲಿ, ಏಕಾಗ್ರ ಚಿತ್ತದಿ, ನಿಷ್ಕಪಟದಿಂದ ಬೇಸರದೆ ಜಪಿಸಲು
ವೃಜಿನಗಳ ನಾಶಗೈಸಿ,
ಮನೋರಥಗಳ ಪರೇಶ ಪೂರ್ತಿಯ ಮಾಡಿ ಕೊಡುವನು ಕಡೆಗೆ ಪರಗತಿಯ ॥ ೧೭ ॥

ಚತುರ ಮೂರ್ತಿ ಆತ್ಮಕ ಹರಿಯು ತ್ರಿಂಶತಿ ಸುರೂಪದಿ ಬ್ರಹ್ಮನೊಳು,
ಮಾರುತನೊಳು ಇಪ್ಪತ್ತೇಳು ರೂಪದೊಳು ಇಪ್ಪ ಪ್ರದ್ಯುಮ್ನ,
ಸುತರೊಳು "ಇಪ್ಪತ್ತು ಐದು - ಹದಿನೆಂಟು" ಅತುಳ ರೂಪಗಳ ಅರಿತು,
ವತ್ಸರ ಶತಗಳಲಿ ಪೂಜಿಸುತಲಿರು ಚತುರ ಆತ್ಮಕನ ಪದವ ॥ ೧೮ ॥

ನೂರು ವರುಷಕೆ ದಿವಸ ಮೂವತ್ತು ಆರು ಸಾವಿರ ವಹವು,
ನಾಡಿ ಶರೀರದೊಳಗೆ ಇನಿತು ಇಹವು ಸ್ತ್ರೀ-ಪುಂ-ಭೇದದಲಿ,
ಹರಿಯು "ಈರು ಅಧಿಕ ಎಪ್ಪತ್ತು ಸಾವಿರ" ಮೂರುತಿಗಳನೆ ನೆನೆದು,
ಸರ್ವ ಆಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿದು ॥ ೧೯ ॥

ಕಾಲ–ಕರ್ಮ–ಗುಣ–ಸ್ವಭಾವಗಳ ಆಲಯನು ತಾನಾಗಿ ಲಕ್ಷ್ಮೀಲೋಲ
ತತ್–ತತ್–ರೂಪ ನಾಮದಿ ಕರೆಸುತ ಒಳಗಿದ್ದು,
ಲೀಲೆಯಿಂದಲಿ ಸರ್ವಜೀವರ ಪಾಲಿಸುವ–ಸಂಹರಿಪ–ಸೃಷ್ಟಿಪ,
ಮೂಲ ಕಾರಣ ಪ್ರಕೃತಿ–ಗುಣ ಕಾರ್ಯಗಳ ಮನೆಮಾಡಿ ॥ ೨೦ ॥

ತಿಲಜ–ವರ್ತಿಗಳ ಅನುಸರಿಸಿ ಪ್ರಜ್–ಜ್ವಲಿಸಿ ದೀಪಗಳು
ಆಲಯದ ಕತ್ತಲೆಯ ಭಂಗಿಸಿ ತದ್ಗತ ಅರ್ಥವ ತೋರುವಂದದಲಿ,
ಜಲರುಹೇಕ್ಷಣ ತನ್ನವರ ಮನದೊಳಗೆ
ಭಕ್ತಿ–ಜ್ಞಾನ–ಕರ್ಮಕೆ ಒಲಿದು ಪೊಳೆವುತ ತೋರುವನು ಗುಣ–ರೂಪ–ಕ್ರಿಯೆಗಳನು ॥ ೨೧ ॥

ಆವ ದೇಹವ ಕೊಡಲಿ (ಹರಿ) ಮತ್ತಾವ ಲೋಕದೊಲು ಇಡಲಿ,
ತಾ ಮತ್ತಾವ ದೇಶದೊಲು ಇಡಲಿ, ಆವ ಅವಸ್ಥೆಗಳು ಬರಲಿ,
ಈ ವಿಧದಿ ಜಡ–ಚೇತನದೊಳು ಪರಾವರೇಶನ ರೂಪ–ಗುಣಗಳ ಭಾವಿಸುತ,
ಸುಜ್ಞಾನ ಭಕುತಿಯ ಬೇಡು ಕೊಂಡಾಡು ॥ ೨೨ ॥

ಒಂದರೊಳಗೆ ಒಂದೊಂದು ಬೆರದಿಹವು, ಇಂದಿರೇಶನ ರೂಪಗಳ ಮನಬಂದ ತೆರದಲಿ
ಚಿಂತಿಸು ಇದಕೆ ಅನುಮಾನ ವಿನಿತಿಲ್ಲ,
ಸಿಂಧು ರಾಜನೊಳು ಅಂಬರ ಆಲಯ ಬಂಧಿಸಲು,
ಪ್ರತಿ ತಂತುಗಳೊಳು ಉದಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರ–ಅಚರದಿ ॥ ೨೩ ॥

ಒಂದು ರೂಪದೊಳು, ಒಂದು ಅವಯವದೊಳು, ಒಂದು ರೋಮದೋಳು, ಒಂದು ದೇಶದಿ ಪೊಂದಿ
ಇಪ್ಪವು,
ಅಜ–ಅಂಡ ಅನಂತ–ಅನಂತ ಕೋಟಿಗಳು,
ಹಿಂದೆ ಮಾರ್ಕಾಂಡೇಯ ಕಾಣನೆ, ಒಂದು ರೂಪದಿ ಸೃಷ್ಟಿ–ಪ್ರಳಯಗಳು
ಇಂದಿರೇಶನೊಳು ಏನು ಇದು ಅಚ್ಚರಿ(?) ಅಪ್ರಮೇಯ ಸದಾ ॥ ೨೪ ॥

ಒಂದು ಅನಂತ ಅನಂತ ರೂಪಗಳು, ಒಂದೆ ರೂಪದೊಳು ಇಹವು, ಲೋಕಗಳು ಒಂದೆ ರೂಪದಿ
ಸೃಷ್ಟಿ ಸ್ಥಿತಿ ಮೊದಲಾದ ವ್ಯಾಪಾರ,
ಒಂದೆ ಕಾಲದಿ ಮಾಡಿ ತಿಳಿಸದೆ ಸಂದಣಿಸಿ ಕೊಂಡಿಪ್ಪ ಜಗದೊಳು,
ನಂದ ನಂದನ ರಣದೊಳು ಇಂದ್ರ ಆತ್ಮಜಗೆ ತೋರಿಸನೆ ॥ ೨೫ ॥

ಶ್ರೀರಮೇಶನ ಮೂರ್ತಿಗಳು ನವ ನಾರಿ ಕುಂಜರದಂತೆ ಏಕ ಆಕಾರ ತೋರ್ಪವು
ಅವಯುವ ಆಹ್ವಯ ಅವಯುವಗಳಲ್ಲಿ,
ಬೇರೆ–ಬೇರೆ ಕಂಗೊಳಿಸುವ ಶರೀರದೊಳು ನಾನಾ ಪ್ರಕಾರ,
ವಿಕಾರ–ಶೂನ್ಯ ವಿರಾಟನೆನಿಸುವ ಪದುಮ–ಜ–ಅಂಡದೊಳು ॥ ೨೬ ॥

ವಾರಿಜ-ಭವ-ಅಂಡದೊಳು ಲಕ್ಷ್ಮೀನಾರಸಿಂಹನ ರೂಪ-ಗುಣಗಳು,
ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸಿ ಇಹವು,
ಕಾರಣ-ಅಂಶ-ಆವೇಶ-ವ್ಯಾಪ್ತ-ಅವತಾರ-ಕಾರ್ಯ-ಅವ್ಯಕ್ತ-ವ್ಯಕ್ತವು,
ಈರು ಐದು ವಿಭೂತಿ ಅಂತರ್ಯಾಮಿ ರೂಪಗಳು ॥ ೨೭ ॥

ಮಣಿಗಳೊಳಗಿಹ ಸೂತ್ರದಂದದಿ ಪ್ರಣವ ಪಾದ್ಯನು ಚೇತನ-ಅಚೇತನ
ಜಗತ್ತಿನೊಳು ಅನುದಿನದಲು ಆಡುವನು ಸುಖಪೂರ್ಣ,
ದಣಿವಿಕೆಯು ಇವಗಿಲ್ಲ, ಬಹು ಕಾರುಣಿಕ, ಅನಂತ-ಅನಂತ ಜೀವರ ಗಣದೊಳು
ಏಕ ಅಂಶ-ಅಂಶ ರೂಪದಿ ನಿಂತು ನೇಮಿಸುವ ॥ ೨೮ ॥

ಜೀವ ಜೀವರ ಭೇದ, ಜಡ ಜಡ, ಜೀವ ಜಡ,
ಜಡ ಜೀವರಿಂದಲಿ ಶ್ರೀವರನು ಅತ್ಯಂತ ಭಿನ್ನ ವಿಲಕ್ಷಣನು,
ಲಕ್ಷ್ಮೀ ಮೂವರಿಂದಲಿ ಪದ್ಮಜ-ಅಂದದಿ ತಾ ವಿಲಕ್ಷಣಳು ಎನಿಸುತ ಇಪ್ಪಳು,
ಸಾ ಅಧಿಕ-ಸಮ ಶೂನ್ಯಳು ಎಂದರಿತು ಈರ್ವರನು ಭಜಿಸು ॥ ೨೯ ॥

ಆದಿತೇಯರು ತಿಳಿಯದಿಹ ಗುಣ ವೇದಮಾನಿಗಳು ಎಂದೆನಿಪ ವಾಣಿ ಆದಿಗಳು ಬಲ್ಲರು,
ಅವರು ಅರಿಯದ ಗುಣಂಗಳನು ವೇಧ ಬಲ್ಲನು,
ಬೊಮ್ಮನು ಅರಿಯದ ಅಗಾಧ ಗುಣಗಳು ಲಕುಮಿ ಬಲ್ಲಳು,
ಶ್ರೀಧರ ಒಬ್ಬನು ಉಪಾಸ್ಯ, ಸತ್-ಗುಣ ಪೂರ್ಣ ಹರಿಯೆಂದು ॥ ೩೦ ॥

ಇಂತ ಅನಂತ ಅನಂತ ಗುಣಗಳ ಪ್ರಾಂತಗಾಣದೆ ಮಹಲಕುಮಿ,
ಭಗವಂತಗೆ ಆಭರಣ ಆಯುಧ ಅಂಬರ ಆಲಯಗಳಾಗಿ,
ಸ್ವಾಂತದಲಿ ನೆಲೆಗೊಳಿಸಿ, ಪರಮ ದುರಂತ ಮಹಿಮನ ದೌತ್ಯಕರ್ಮ
ನಿರಂತರದಿ ಮಾಡುತಲಿ, ತದಧೀನತ್ವ ಯೈದಿಹಳು ॥ ೩೧ ॥

ಪ್ರಳಯ ಜಲಧಿಯೊಳು ಉಳ್ಳ ನಾವೆಯು ಹೊಲಬುಗಾಣದೆ ಸುತ್ತುವಂದದಿ,
ಜಲರುಹೇಕ್ಷಣನ ಅಮಲ ಗುಣ-ರೂಪಗಳ ಚಿಂತಿಸುತ,
ನೆಲೆಯ ಗಾಣದೆ, ಮಹಲಕುಮಿ ಚಂಚಲವನು ಐದಿಹಳು,
ಅಲ್ಪ ಜೀವರಿಗೆ ಅಳವಡುವದೇನು ಇವನ ಮಹಿಮೆಗಳು ಈ ಜಗತ್ರಯದಿ ॥ ೩೨ ॥

ಶ್ರೀನಿಕೇತನ-ಸಾತ್ವತಾಂಪತಿ-ಜ್ಞಾನ ಗಮ್ಯ-ಗಯಾಸುರ ಅರ್ದನ-ಮೌನಿಕುಲ ಸನ್ಮಾನ್ಯ-
"ಮಾನ ದ"-ಮಾತುಳ ಧ್ವಂಸಿ,
ದೀನಜನ ಮಂದಾರ-ಮಧು ರಿಪು-"ಪ್ರಾಣ ದ" ಜಗನ್ನಾಥ ವಿಠಲ,
ತಾನೆ ಗತಿಯೆಂದು ಅನುದಿನದಿ ನಂಬಿದವರ ಪೊರೆವ ॥ ೩೩ ॥

॥ ಶ್ರೀ: ॥

## ॥ ಮಾತೃಕಾ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಪಾದಮಾನಿ ಜಯಂತನ ಒಳಗೆ ಸುಮೇಧ ನಾಮಕನು ಇಪ್ಪ,
ದಕ್ಷಿಣ ಪಾದದ ಅಂಗುಟದಲ್ಲಿ ಪವನನು ಭಾರಭೃದ್ ರೂಪ.
ಕಾದುಕೊಂಡಿಹ ಟಂಕಿ–ತರ ಮೊದಲಾದ ನಾಮದಿ,
ಸಂಧಿಗಳಲಿ ಈರು ಐದು ರೂಪದಲಿ ಇಪ್ಪ ಸಂತತ ನಡೆದು ನಡೆಸುತಲಿ ॥ ೧ ॥

ಕಪಿಲ ಚಾರ್ವಾಂಗ ಆದಿ ರೂಪದಿ ವಪುಗಳೊಳು ಹಸ್ತಗಳ ಸಂಧಿಯೊಳು
ಅಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ,
ಕೃಪಣ ವತ್ಸಲ ಪಾರ್ಶ್ವದೊಳು ಪರ–ಸುಫಲಿಯೆನಿಸುವ,
ಗುದ–ಉಪಸ್ಥದಿ ವಿಪುಳ ಬಲಿ–ಭಗ, ಮನವೆನಿಸಿ ತುಂದಿಯೊಳಗೆ ಇರುತಿಹನು ॥ ೨ ॥

"ಐದು ಮೇಲೆ ಒಂದು ಅಧಿಕ" ದಳ ವುಳ್ಳ ಐದು ಪದ್ಮವು ನಾಭಿ ಮೂಲದಿ,
ಐದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ,।
ಐದಿಸುತ ಗರ್ಭವನು ಜೀವರ ಅನಾದಿ ಕರ್ಮ–ಪ್ರಕೃತಿ–ಗುಣಗಳ,
ಹಾದಿ ತಪ್ಪಲು ಗೊಡದೆ ವ್ಯಾಪಾರಗಳ ಮಾಡುತಿಹ ॥ ೩ ॥

ನಾಭಿಯಲಿ ಷಟ್ ಕೋಣ ಮಂಡಲದ ಈ ಭವಿಷ್ಯದ್ ಬ್ರಹ್ಮನೊಳು
ಮುಕ್ತಾಭ ಶ್ರೀಪ್ರದ್ಯುಮ್ನನು ಇಪ್ಪನು ವಿಬುಧ ಗಣಸೇವ್ಯ,
ಶೋಭಿಸುವ ಕೌಸ್ತುಭವೆ ಮೊದಲಾದ ಆಭರಣ ಆಯುಧಗಳಿಂದ,
ಮಹಾ ಭಯಂಕರ ಪಾಪ ಪುರುಷನ ಶೋಷಿಸುತ ನಿತ್ಯ ॥ ೪ ॥

ದ್ವಾದಶ ಅರ್ಕರ ಮಂಡಲವು ಮಧ್ಯ ಉದರದೊಳು ಸುಷುಮ್ನ ದೊಳಗಿಹದು
ಐದು ರೂಪಾತ್ಮಕನು "ಅರವತ್ತು ಅಧಿಕ ಮುನ್ನೂರು" ॥
ಈ ದಿವಾ–ರಾತ್ರಿಗಳ ಮಾನಿಗಳು ಆದ ದಿವಿಜರ ಸಂತಯಿಸುತ
ನಿಷಾದ ರೂಪಕ ದೈತ್ಯರನು ಸಂಹರಿಪ ನಿತ್ಯದಲಿ ॥ ೫ ॥

ಹೃದಯದೊಳಗಿಹದು ಅಷ್ಟದಳ ಕಮಲ, ಅದರ ಒಳಗೆ,
ಪ್ರಾದೇಶ ನಾಮಕ ನುದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ,
ಪದುಮ–ಚಕ್ರ–ಸುಶಂಖ–ಸುಗದ–ಅಂಗದ–ಕಟಕ–ಮಕುಟ–ಅಂಗುಳೀಯಕ–
ಪದಕ–ಕೌಸ್ತುಭ ಹಾರ–ಗ್ರೈವೇಯ ಆದಿ ಭೂಷಿತನು ॥ ೬ ॥

ದ್ವಿದಳ ಪದ್ಮವು ಶೋಭಿಪುದು ಕಂಠದಲಿ, ಮುಖ್ಯಪ್ರಾಣ
ತನ್ನಯ ಸುದತಿಯಿಂದ ಒಡಗೂಡಿ ಹಂಸ ಉಪಾಸನೆಯ ಮಾಳ್ಪ,
ಉದಕವು–ಅನ್ನಾದಿಗಳಿಗೆ ಅವಕಾಶದನು ತಾನಾಗಿದ್ದು
ಉದಾನ ಅಭಿಧನು ಶಬ್ದವ ನುಡಿದು ನುಡಿಸುವ ಸರ್ವಜೀವರೊಳು ॥ ೭ ॥

ನಾಸಿಕದಿ ನಾಸತ್ಯ–ದಸ್ರರು ಶ್ವಾಸಮಾನೀ ಪ್ರಾಣ ಭಾರತಿ,
ಹಂಸ ಧನ್ವಂತ್ರಿಗಳು ಅಲ್ಲಲ್ಲಿ ಇಪ್ಪರು ಅವರೊಳಗೆ,
ಭೇಶ–ಭಾಸ್ಕರರು ಅಕ್ಷಿ ಯುಗಳಕೆ ಅಧೀಶರೆನಿಪರು,
ಅವರೊಳಗೆ ಲಕ್ಷ್ಮೀಶ–ದಧಿ ವಾಮನರು ನೀಯಾಮಿಸುತಲಿ ಇರುತಿಹರು ॥ ೮ ॥

ಸ್ತಂಭ ರೂಪದಲಿ ಇಪ್ಪ ದಕ್ಷಿಣ ಅಂಬಕದಿ ಪ್ರದ್ಯುಮ್ನ,
ಗುಣ ರೂಪ ಅಂಭೃಣಿಯು ತಾನಾಗಿ ಇಪ್ಪಳು,
ವತ್ಸರೂಪದಲಿ ಪೊಂಬಸಿರ ಪದಯೋಗ್ಯ ಪವನ,
ತ್ರಿಯಂಬಕ ಆದಿ ಸಮಸ್ತ ದಿವಿಜ ಕದಂಬ ಸೇವಿತನಾಗಿ ಸರ್ವ ಪದಾರ್ಥಗಳ ತೋರ್ಪ ॥ ೯ ॥

ನೇತ್ರಗಳಲಿ ವಸಿಷ್ಠ–ವಿಶ್ವಾಮಿತ್ರ–ಭಾರದ್ವಾಜ–ಗೌತಮ–ಅತ್ರಿ–
ಆ ಜಮದಗ್ನಿ ನಾಮಗಳಿಂದ ಕರೆಸುತಲಿ,
ಪತ್ರತಾಪಕ–ಶಕ್ರ–ಸೂರ್ಯ–ಧರಿತ್ರಿ–ಪರ್ಜನ್ಯ ಆದಿ ಸುರರು
ಜಗತ್ರಯ ಈಶನ ಭಜಿಪರು ಅನುದಿನ ಪರಮ ಭಕುತಿಯಲಿ ॥ ೧೦ ॥

ಜ್ಯೋತಿಯೊಳಗೆ ಇಪ್ಪನು ಕಪಿಲ ಪುರುಹೂತ ಮುಖ ದಿಕ್ಪತಿಗಳಿಂದ ಸಮೇತನಾಗಿ,
ದಕ್ಷಿಣ ಅಕ್ಷಿಯ ಮುಖದೊಳಿಹ ವಿಶ್ವ,।
ಶ್ವೇತ ವರ್ಣ ಚತುರ್ಭುಜನು ಸಂಪ್ರೀತಿಯಿಂದಲಿ
ಸ್ಥೂಲ ವಿಷಯವ ಚೇತನರಿಗೆ ಉಂಡು ಉಣಿಪ ಜಾಗ್ರತೆಯಿತ್ತು ನೃಗಜಾಸ್ಯ ॥ ೧೧ ॥

ನೆಲೆಸಿಹರು ದಿಕ್–ದೇವತೆಗಳು ಇಕ್ಕರದ ಕರ್ಣಂಗಳಲಿ,
ತೀರ್ಥಂಗಳಿಗೆ ಮಾನಿಗಳಾದ ಸುರನದಿ ಮುಖ್ಯ ನಿರ್ಜರರು
ಬಲದ ಕಿವಿಯಲಿ ಇರುತಿಹರು, ಬಾಂಬೊಳೆಯ ಜನಕ ತ್ರಿವಿಕ್ರಮನು
ನಿರ್ಮಲಿನರನು ಮಾಡುವನು ಈಪರಿ ಚಿಂತಿಸುವ ಜನರ ॥ ೧೨ ॥

ಚಿತ್ತ-ಜ ಇಂದ್ರರು ಮನದೊಳು ಇಪ್ಪರು, ಕೃತ್ತಿವಾಸನು ಅಹಂಕಾರದಿ,
ಚಿತ್ತ-ಚೇತನಮಾನಿಗಳು ವಿಹಗ ಇಂದ್ರ-ಫಣಿಪರೊಳು ನಿತ್ಯದಲಿ ನೆಲೆಗೊಂಡು,
ಹತ್ತೊಂಭತ್ತು ಮೊಗ ತೈಜಸನು
ಸ್ವಪ್ನ ಅವಸ್ಥೆ ಯೈದಿಸಿ ಜೀವರನು ಪ್ರವಿವಿಕ್ತ ಭುಕುವೆನಿಪ ॥ ೧೩ ॥

ಜ್ಞಾನಮಯ ತೈಜಸನು ಹೃದಯ ಸ್ಥಾನವ ಐದಿಸಿ
ಪ್ರಾಜ್ಞನೆಂಬ ಅಭಿಧಾನದಿಂ ಕರೆಸುತ್ತ ಚಿತ್-ಸುಖ ವ್ಯಕ್ತಿಯನೆ ಕೊಡುತ,
ಆನತೆಷ್ಟ ಪ್ರದನು ಅನುಸಂಧಾನ ವೀಯದೆ ಸುಪ್ತಿ ಯೈದಿಸಿ,
ತಾನೆ ಪುನರಪಿ ಸ್ವಪ್ನ ಜಾಗ್ರತೆಯೀವ ಚೇತನಕೆ ॥ ೧೪ ॥

ನಾಲಿಗೆಯೊಳಿಹ ವರುಣ ಮತ್ಸ್ಯ, ಅಣುನಾಲಿಗೆಯೊಳು ಉಪೇಂದ್ರ ಇಂದ್ರರು,
ತಾಲು ಪರ್ಜನ್ಯಾಖ್ಯ ಸೂರ್ಯನು ಅರ್ಧಗರ್ಭನಿಹ,
ಆಲೆಯೊಳು ವಾಮನ ಸುಭಾಮನ, ಫಾಲದೊಳು ಶಿವ ಕೇಶವನು,
ಸು-ಕಪೋಲದೊಳಗೆ ರತೀಶ ಕಾಮನು ಅಲ್ಲಿ ಪ್ರದ್ಯುಮ್ನ ॥ ೧೫ ॥

ರೋಮಗಳಲಿ ವಸಂತ ತ್ರಿ-ಕಕುತ್-ಧಾಮ, ಮುಖದೊಳಗೆ ಅಗ್ನಿ ಭಾರ್ಗವ,
ತಾಮರಸ ಭವ ವಾಸುದೇವರು ಮಸ್ತಕದೊಳಿಹರು,
ಈ ಮನದೊಳಿಹ ವಿಷ್ಣು, ಶಿಖದೊಳು ಉಮಾಮಹೇಶ್ವರ ನಾರಸಿಂಹಸ್ವಾಮಿ
ತನ್ನ ಅನುದಿನದಿ ನೆನೆವರ ಮೃತ್ಯು ಪರಿಹರಿಪ ॥ ೧೬ ॥

"ವಿಶೇಷ – ಈ ಮನದೊಳಿಹ ವಿಷ್ಣು (ಅಹಂಕಾರಿಕ ಪ್ರಾಣನ ದೇವತೆ)"

ಮೌಳಿಯಲ್ಲಿಹ ವಾಸುದೇವನು ಏಳು ಅಧಿಕ ನವ ಜಾತಿ ರೂಪವ ತಾಳಿ,
ಮುಖದೊಳು-ಶ್ರವಣ-ನಯನ ಆದಿ ಅವಯುವಗಳಿಗೆ ಆಳರಸು ತಾನಾಗಿ,
ಸತತ ಸುಲೀಲೆ ಗೈಯುತಲಿ ಇಪ್ಪ,
ಸುಖಮಯ, ಕೇಳಿ ಕೇಳಿಸಿ, ನೋಡಿ ನೋಡಿಸಿ, ನುಡಿದು ನುಡಿಸುವನು ॥ ೧೭ ॥

"ಎರಡಧಿಕವು ಎಪ್ಪತ್ತು ಎನಿಪ ಸಾವಿರದ" ನಾಡಿಗೆ
ಮುಖ್ಯವು ಏಕ ಉತ್ತರ ಶತಗಳು, ಅಲ್ಲಿ ಇಹವು ನೂರಾ ಒಂದು ಮೂರ್ತಿಗಳು,
ಅರಿದು ದೇಹದಿ ಕಲಶ ನಾಮಕ ಹರಿಗೆ ಕಳೆಗಳು ಇವು ಎಂದು,
ನೈರಂತರದಿ ಪೂಜಿಸುತಿಹರು ಪರಮಾದರದಿ ಭೂ-ಸುರರು ॥ ೧೮ ॥

ಇದಕೆ ಕಾರಣ ವೆನಿಸುವವು "ಎರಡು ಅಧಿಕ ದಶ" ನಾಡಿಗಳ ಒಳಗೆ
ಸುರ ನದಿಯೆ ಮೊದಲಾದ ಅಮಲ ತೀರ್ಥಗಳು ಇಹವು ಕರಣದಲಿ,
ಪದುಮನಾಭನು ಕೇಶವ ಆದಿ ದ್ವಿ-ದಶ ರೂಪದಲಿ ಇಪ್ಪನು ಅಲ್ಲಿ
ಅತಿ ಮೃದುಳವಾದ ಸುಷುಮ್ನದೊಳಗೆ ಏಕ ಆತ್ಮ ನೆನಿಸುವನು ॥ ೧೯ ॥

ಆಮ್ನಯ ಪ್ರತಿಪಾದ್ಯ ಶ್ರೀ ಪ್ರದ್ಯುಮ್ನ ದೇವನು ದೇಹದೊಳಗೆ
ಸುಷುಮ್ನದಿ-ಈಡಾ-ಪಿಂಗಳದಿ ವಿಶ್ವಾದಿ ರೂಪದಲಿ,
ನಿರ್ಮಲಾತ್ಮನು, ವಾಣಿ-ವಾಯು-ಚತುರ್ಮುಖರೊಳು ಇದ್ದು ಅಖಿಳ ಜೀವರ,
ಕರ್ಮ-ಗುಣವ ಅನುಸರಿಸಿ ನಡೆವನು ವಿಶ್ವ-ವ್ಯಾಪಕನು ॥ ೨೦ ॥

ಅಬ್ದ-ಅಯನ-ಋತು-ಮಾಸ-ಪಕ್ಷ ಸು-ಶಬ್ದದಿಂದಲಿ ಕರೆಸುತಲಿ
ನೀಲಾಬ್ದ ವರ್ಣ ಅನಿರುದ್ಧನೇ ಮೊದಲಾದ ಐದು ರೂಪದಲಿ,
ಹಬ್ಬಿಹನು ಸರ್ವತ್ರದಲಿ ಕರುಣ ಅಬ್ಧಿ ನಾಲ್ವತ್ತು ಐದು ರೂಪದಿ,
ಲಭ್ಯನಾಗುವನೀ ಪರಿ ಧೇನಿಸುವ ಭಕುತರಿಗೆ ॥ ೨೧ ॥

ಐದು ರೂಪ ಆತ್ಮಕನು ಇಪ್ಪತ್ತು ಐದು ರೂಪದಲಿ ಇಪ್ಪ,
ಮತ್ತೆ ಹದಿನೈದು ತಿಥಿ, ಯಿಪ್ಪತ್ತು-ನಾಲಕರಿಂದ ಪೆಚ್ಚಿಸಲು
ಐದುವದು ಅರವತ್ತು ಅಧಿಕ ಆರು ಐದು ದಿವಸ ಆಹ್ವಯನೊಳಗೆ
ಮನ ತೋಯ್ದುವಗೆ ತಾಪತ್ರಯದ ಮಹದೋಷ ವೆಲ್ಲಿಹದೋ? ॥ ೨೨ ॥

ದಿವಸ-ಯಾಮ-ಮೂಹೂರ್ತ-ಘಟಿಕ ಆದಿ ಅವಯುವಗಳೊಳಗೆ ಇದ್ದು
ಗಂಗಾ ಪ್ರವಹದಂದದಿ ಕಾಲನಾಮಕ ಪ್ರವಹಿಸುತಲಿ ಇಪ್ಪ,
ಇವನ ಗುಣ-ರೂಪ-ಕ್ರಿಯಂಗಳ ನಿವಹದೊಳು ಮುಳುಗಿ ಆಡುತಲಿ
ಭಾರ್ಗವಿ ಸದ-ಆನಂದ-ಆತ್ಮಳು ಆಗಿಹಳು ಎಲ್ಲ ಕಾಲದಲಿ ॥ ೨೩ ॥

ವೇದತತಿಗಳ ಮಾನಿ ಲಕ್ಷ್ಮೀ, ಧರಾ ಧರನ ಗುಣ-ರೂಪ-ಕ್ರಿಯೆಗಳ
ಆದಿ-ಮಧ್ಯ-ಅಂತವನು ಕಾಣದೆ ಮನದಿಯೋಚಿಸುತ,
ಆದಪೆನೆ ಈತನಿಗೆ ಪತ್ನಿ? ಕೃಪೋದಧಿಯು ಸ್ವೀಕರಿಸಿದನು
ಲೋಕ ಅಧಿಪನು ಭಿಕ್ಷುಕನ ಮನೆಯ ಔತನವ ಕೊಂಬಂತೆ ॥ ೨೪ ॥

ಕೋವಿದರು ಚಿತ್ತೈಸುವದು, ಶ್ರೀದೇವಿ ಯೊಳಗಿಹ ನಿಖಿಲ ಗುಣ
ತೃಣ ಜೀವರಲಿ ಕಲ್ಪಿಸಿ ಯುಕುತಿಯಲಿ ಮತ್ತು ಕ್ರಮದಿಂದ
ದೇವ ದೇವಕಿ ಯಿಪ್ಪಳು ಎಂದರಿದು, ಆ ವಿರಿಂಚನ ಜನನಿ
ಯೀತನ ಆವಕಾಲಕು ಅರಿಯಳು ಅಂತವ, ನರರ ಪಾಡೇನು ॥ ೨೫ ॥

ಕ್ಷೀರ-ದಧಿ-ನವನೀತ-ಘೃತದೊಳು ಸೌರಭ ರಸ ಆಹ್ವಯ ನೆನಿಸಿ ಶಾಂತೀರಮಣ
ಜ್ಞಾನ-ಇಚ್ಛಾ-ಕ್ರಿಯಾ-ಶಕ್ತಿ ಯೆಂದೆಂಬ ಈರು ಎರಡು ನಾಮದಲಿ ಕರೆಸುತ,
ಭಾರಾತೀ-ವಾಗ್ದೇವಿ-ವಾಯು-ಸರೋರುಹ ಆಸನರು
ಅಲ್ಲಿ ನೆಲೆಸಿಹರು ಎಲ್ಲ ಕಾಲದಲಿ ॥ ೨೬ ॥

ವಸುಗಳು ಎಂಟು, ನವ ಪ್ರಜ ಈಶರು, ಶ್ವಸನ ಗಣವು ಐವತ್ತು,
ಏಕಾ-ದಶ ದಿವಾಕರರು ಅನಿತೆ ರುದ್ರರು, ಅಶ್ವಿನಿಗಳು ಎರಡು,
ದಶ ವಿಹೀನ ಶತಾಖ್ಯ ಈ ಸುಮನಸರ ಒಳಗೆ
ಚತುರ ಆತ್ಮ ನೀಯಾಮಿಸುವ ಬ್ರಹ್ಮ-ಸಮೀರ-ಖಗ-ಫಣೀಂದ್ರರ ಒಳಗೆ ಇದ್ದು ॥ ೨೭ ॥

ತೋರುತ ಇಪ್ಪನು ಚಕ್ರದಲಿ ಹಿಂಕಾರ ನಾಮಕ, ಶಂಖದಲಿ ಪ್ರತಿಹಾರ,
ಗದೆಯಲಿ ನಿಧನ, ಪದ್ಮದಲಿ ಇಪ್ಪ ಪ್ರಸ್ಥಾನ,
ಕಾರುಣಿಕನು ಉದ್ಗೀಥ ನಾಮದಿ (ಶಂಖದಲಿ), ಮಾರಮಣನ ಐ ರೂಪಗಳ
ಶಂಖಾರಿ ಮೊದಲಾದ ಆಯುಧಗಳೊಳು ಸ್ಮರಿಸಿ ಧರಿಸುತಿರು ॥ ೨೮ ॥

ತನುವೆ ರಥ, ವಾಕ್-ಅಭಿಮಾನಿಯೆ ಗುಣ ವೆನಿಸುವಳು,
ಶ್ರೋತ್ರದೊಳು ರೋಹಿಣಿ-ಶಶಾಂಕರು ಪಾಶ ಪಾಣಿಗಳು, ಅಶ್ವವೆಂದೆನಿಸಿ
ಇನನು ಸಂಜ್ಞಾ ದೇವಿಯರು, ಇಹರ ಅನಲ ಲೋಚನ,
ಸೂತನೆನಿಸುವ ಪ್ರಣವ ಪಾದ್ಯ ಪ್ರಾಣ ನಾಮಕ ರಥಿಕನೆನಿಸುವನು ॥ ೨೯ ॥

ಅಮಿತ ಮಹಿಮನ ಅಪಾರ ಗುಣಗಳ, ಸಮಿತ ವರ್ಣಾತ್ಮಕ ಶ್ರುತಿ ಸ್ಮೃತಿ ಗಮಿಸಲಾಪವೆ,
ತದ್-ಅಭಿಮಾನಿಗಳು ಎಂದೆನಿಸಿಕೊಂಬ
ಕಮಲ ಸಂಭವ-ಭವ-ಸುರ ಇಂದ್ರ ಆದಿ ಅಮರರು ಅನುದಿನ ತಿಳಿಯಲು ಅರಿಯರು,
ಸ್ವಮಹಿಮೆಗಳ ಆದಿ-ಅಂತ-ಮಧ್ಯಗಳು ಅರಿವ ಸರ್ವಜ್ಞ ॥ ೩೦ ॥

ವಿತ್ತ-ದೇಹ-ಆಗಾರ-ದಾರಾ-ಪತ್ಯ-ಮಿತ್ರ ಆದಿಗಳೊಳಗೆ
ಹರಿ ಪ್ರತ್ಯಗಾತ್ಮನು ಎಂದೆನಿಸಿ ನೆಲೆಸಿಪ್ಪ ನೆಂದರಿದು,
ನಿತ್ಯದಲಿ ಸಂತೃಪ್ತಿ ಬಡಿಸುತ ಉತ್ತಮ-ಅಧಮ-ಮಧ್ಯಮರ
ಕೃತ ಕೃತ್ಯನಾಗು ಉನ್ಮತ್ತನು ಆಗದೆ ಭೃತ್ಯ ನಾನೆಂದು ॥ ೩೧ ॥

ದೇವ ದೇವೇಶನ ಸುಮೂರ್ತಿ ಕಳೇವರಗಳೊಳಗೆ ಅನವರತ ಸಂಭಾವಿಸುತ-
ಪೂಜಿಸುತ-ನೋಡುತ-ಸುಖಿಸುತಿರು ಬಿಡದೆ,
ಶ್ರೀವರ ಜಗನ್ನಾಥ ವಿಠಲ ತಾ ಒಲಿದು ಕಾರುಣ್ಯದಲಿ
ಭವ ನೋವ ಪರಿಹರಿಸುವನು ಪ್ರವಿತತ ಪತಿತ ಪಾವನನು ॥ ೩೨ ॥

॥ ಇತಿ ಶ್ರೀ ಮಾತೃಕಾ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ವರ್ಣಪ್ರಕ್ರಿಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಹರಿಯೆ ಪಂಚಾಶತ್ ವರ್ಣ, ಸುಸ್ವರವು ಉದಾತ್ತ–ಅನುದಾತ್ತ–ಪ್ರಚಯ–
ಸ್ವರಿತ–ಸಂಧಿ–ವಿಸರ್ಗ–ಬಿಂದುಗಳೊಳಗೆ ತದ್ವಾಚ್ಯ ಇರುವ,
ತನ್ನಾಮ ರೂಪಗಳ ಅರಿತು ಉಪಾಸನೆ ಗೈವರು ಇಳೆಯೊಳು,
ಸುರರೆ ಸರಿ, ನರರು ಅಲ್ಲ, ಅವರು ಆಡುವುದೆ ವೇದ ಅರ್ಥ ॥ ೧ ॥

ಈಶನಲಿ ವಿಜ್ಞಾನ, ಭಗವದ್–ದಾಸರಲಿ ಸದ್ಭಕ್ತಿ, ವಿಷಯ ನಿರಾಶೆ,
ಮಿಥ್ಯಾ ವಾದದಲಿ ಪ್ರದ್ವೇಷ, ನಿತ್ಯದಲಿ ಈ ಸಮಸ್ತ ಪ್ರಾಣಿಗಳಲಿ
ರಮೇಶನು ಇಹನೆಂದು ಅರಿದು, ಅವರ ಅಭಿಲಾಷೆಗಳ ಪೂರಯಿಸುವುದೆ
ಮಹಯಜ್ಞ ಹರಿಪೂಜೆ ॥ ೨ ॥

ತ್ರಿ–ದಶ ಏಕ–ಆತ್ಮಕನು ಎನಿಸಿ ಭೂ–ಉದಕ–ಶಿಖಿಯೊಳು ಹತ್ತು ಕರಣದಿ,
ಅಧಿಪರು ಎನಿಸುವ ಪ್ರಾಣ ಮುಖ್ಯ ಆದಿತ್ಯರೊಳು ನೆಲೆಸಿ,
ವಿದಿತನಾಗಿದ್ದು ಅನವರತ ನಿರವಧಿಕ ಮಹಿಮನು,
ಸಕಲ ವಿಷಯವ ನಿಧನ ನಾಮಕ ಸಂಕರುಷಣ ಆಹ್ವಯನು ಸ್ವೀಕರಿಪ ॥ ೩ ॥

ದೈಹಿಕ–ದೈಶಿಕ–ಕಾಲಿಕ ತ್ರಯ ಗಹನ ಕರ್ಮಗಳು ಉಂಟು,
ಇದರೊಳು ವಿಹಿತ ಕರ್ಮಗಳ ಅರಿತು ನಿಷ್ಕಾಮಕನು ನೀನಾಗಿ,
ಬೃಹತಿ ನಾಮಕ ಭಾರತಿ–ಈಶನ ಮಹಿತರೂಪವ ನೆನೆದು ಮನದಲಿ,
ಅಹರ್–ಅಹರ್ ಭಗವಂತಗರ್ಪಿಸು ಪರಮ ಭಕುತಿಯಲಿ ॥ ೪ ॥

ಮೂರು ವಿಧ ಕರ್ಮಗಳ ಒಳಗೆ ಕಂಸಾರಿ–ಭಾರ್ಗವ–ಹಯವದನ
ಸಂಪ್ರೇರಕನು ತಾನಾಗಿ ನವರೂಪಂಗಳನು ಧರಿಸಿ,
ಸೂರಿ–ಮಾನವ–ದಾನವರೊಳು ವಿಕಾರ ಶೂನ್ಯನು ಮಾಡಿ ಮಾಡಿಸಿ,
ಸಾರ–ಭೋಕ್ತನು ಸ್ವೀಕರಿಸಿ ಕೊಡುತ, ಇಪ್ಪ ಜೀವರಿಗೆ ॥ ೫ ॥

ಅನಳ ಪಕ್ವವ ಗೈಸಿದ ಅನ್ನವ ಅನಳನೊಳು ಹೋಮಿಸುವ ತೆರದಂತೆ,
ಅನಿಮಿಷೇಶನು ಮಾಡಿ ಮಾಡಿಸಿದಖಿಳ ಕರ್ಮಗಳ ಮನವಚನ ಕಾಯದಲಿ ತಿಳಿದು,
ಅನುದಿನದಿ ಕೊಡು ಶಂಕಿಸದೆ, ವೃಜಿನ ಅರ್ದನ,
ಸದಾ ಕೈಕೊಂಡು ಸಂತಯಿಸುವನು ತನ್ನವರ ॥ ೬ ॥

ಕುದುರೆ ಬಾಲದ ಕೊನೆಯ ಕೂದಲು ತುದಿ ವಿಭಾಗವ ಮಾಡಿ ಶತವಿಧವು,
ಅದರೊಳೊಂದನು ನೂರು ಭಾಗವ ಮಾಡಲು ಎಂತಿಹುದೊ,
ವಿಧಿ–ಭವ ಆದಿ ಸಮಸ್ತ ದಿವಿಜರ ಮೊದಲು ಮಾಡಿ,
ತೃಣ ಅಂತ ಜೀವರೊಳು ಅಧಿಕ–ನ್ಯೂನತೆ ಯಿಲ್ಲವು ಎಂದಿಗು, ಜೀವ ಪರಮಾಣು ॥ ೭ ॥

ಜೀವನ ಅಂಗುಷ್ಠ ಅಗ್ರ ಮೂರುತಿ, ಜೀವನ ಅಂಗುಟ ಮಾತ್ರ ಮೂರುತಿ,
ಜೀವನ ಪ್ರಾದೇಶ, ಜೀವಾಕಾರ ಮೂರ್ತಿಗಳು,
ಏವಮಾದಿ ಅನಂತ ರೂಪದಿ ಯಾವತ್–ಅವಯುವಗಳೊಳು ವ್ಯಾಪಿಸಿ ಕಾವ,
ಕರುಣಾಳುಗಳ ದೇವನು ಈ ಜಗತ್ರಯವ ॥ ೮ ॥

ಬಿಂಬ ಜೀವ ಅಂಗುಷ್ಠ ಮಾತ್ರದಿ ಇಂಬುಗೊಂಡಿಹ ಸರ್ವರೊಳು ಸೂಕ್ಷ್ಮ ಅಂಬರದಿ
ಹೃತ್ಕಮಲ ಮಧ್ಯ ನಿವಾಸಿ ಯೆಂದೆನಿಸಿ,
ಎಂಬರು ಈತಗೆ ಕೋವಿದರು ವಿಶ್ವಂಭರ–ಆತ್ಮಕ–ಪ್ರಾಜ್ಞ,
ಭಕ್ತ ಕುಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು ॥ ೯ ॥

ಪುರುಷ ನಾಮಕ ಸರ್ವ ಜೀವರೊಳು ಇರುವ ದೇಹ ಆಕಾರ ರೂಪದಿ,
ಕರಣ ನಿಯಾಮಕ ಹೃಷೀಕಪನು ಇಂದ್ರಿಯಂಗಳಲಿ,
ತುರಿಯ ನಾಮಕ ವಿಶ್ವ ತಾ ಹನ್ನೆರಡು ಬೆರಳು ಉಳಿದು ಉತ್ತಮ ಅಂಗದಿ,
ಎರಡು ಅಧಿಕ ಎಪ್ಪತ್ತು ಸಾವಿರ ನಾಡಿಯೊಳಗೆ ಇಪ್ಪ ॥ ೧೦ ॥

ವ್ಯಾಪಕನು ತಾನಾಗಿ ಜೀವ ಸ್ವರೂಪ ದೇಹದ ಒಳಹೊರಗೆ ನಿರ್ಲೇಪನು ಆಗಿಹ
ಜೀವಕೃತ ಕರ್ಮಗಳನು ಆಚರಿಸಿ,
ಶ್ರೀ–ಪಯೋಜಭವ–ಈರರಿಂದ ಪ್ರದೀಪವರ್ಣ ಸ್ವಮೂರ್ತಿ ಮಧ್ಯ–ಗ ತಾ ಪೊಳೆವ
ವಿಶ್ವ ಆದಿ ರೂಪದಿ ಸೇವೆ ಕೈಕೊಳುತ ॥ ೧೧ ॥

ಗರುಡ ಶೇಷ ಭವಾದಿ ನಾಮವ ಧರಿಸಿ ಪವನ,
ಸ್ವರೂಪ ದೇಹದಿ ಕರಣ ನಿಯಾಮಕನು ತಾನು ಆಗಿಪ್ಪ ಹರಿಯಂತೆ,
ಸರಸಿಜ ಆಸನ ವಾಣಿ–ಭಾರತಿ–ಭರತನಿಂದ ಒಡಗೂಡಿ
ಲಿಂಗದಿ ಇರುತಿಹನು ಮಿಕ್ಕ ಆದಿತೇಯರಿಗೆ ಇಲ್ಲವು ಆಸ್ಥಾನ ॥ ೧೨ ॥

ಜೀವನಕೆ ತುಷದಂತೆ ಲಿಂಗವು ಸಾವಕಾಶದಿ ಪೊಂದಿ ಸುತ್ತಲು,
ಪ್ರಾವರಣ ರೂಪದಲಿ ಇಪ್ಪುದು ಭಗವದ್ ಇಚ್ಛೆಯಲಿ,
ಕೇವಲ ಜಡ ಪ್ರಕೃತಿ, ಯಿದಕೆ ಅಧಿದೇವತೆಯು ಮಹಲಕುಮಿ ಯೆನಿಪಳು,
ಆ ವಿರಜೆಯ ಸ್ನಾನ ಪರಿಯಂತರದಿ ಹತ್ತಿಹುದು ॥ ೧೩ ॥

ಆರಧಿಕ ದಶಕಳೆಗಳು ಉಳ್ಳ ಶರೀರವು ಅನಿರುದ್ಧಗಳ ಮಧ್ಯದಿ ಸೇರಿ ಇಪ್ಪದು
ಜೀವ ಪರಮ ಆಚ್ಛಾದಿಕ ದ್ವಯವು,
ಬಾರದಂದದಿ ದಾನವರನು ಅತಿ ದೂರಗೈಸುತ ಶ್ರೀಜನ-ಅರ್ದನ,
ಮೂರು ಗುಣದೊಳಗೆ ಇಪ್ಪನು ಎಂದಿಗು ತ್ರಿವೃತು ಯೆಂದೆನಿಸಿ ॥೧೪ ॥

ರುದ್ರ ಮೊದಲಾದ ಅಮರರಿಗೆ ಅನಿರುದ್ಧ ದೇಹವೆ ಮನೆಯೆನಿಸುವುದು,
ಇದ್ದು ಕೆಲಸವ ಮಾಡರು, ಅಲ್ಲಿಂದ ಇತ್ತ-ಸ್ಥೂಲದಲಿ ಕ್ರುದ್ಧ ಅಖಿಲ ದಿವಿಜರು
ಪರಸ್ಪರ ಸ್ಪರ್ಧೆ ಯಿಂದಲಿ ದ್ವಂದ್ವ ಕರ್ಮ ಸಮೃದ್ಧಿಗಳನು
ಆಚರಿಸುವರು ಪ್ರಾಣೇಶನ ಆಜ್ಞೆಯಲಿ ॥ ೧೫ ॥

ಮಹಿಯೊಳಗೆ ಸುಕ್ಷೇತ್ರ ತೀರ್ಥವು, ತುಹಿನ-ವರುಷ-ವಸಂತಕಾಲದಿ,
ದಹಿಕ-ದೈಶಿಕ-ಕಾಲಿಕ ತ್ರಯ ಧರ್ಮಕರ್ಮಗಳ,
ದ್ರುಹಿಣ ಮೊದಲಾದ ಅಮರರು ಎಲ್ಲರು ವಹಿಸಿ ಗುಣಗಳನು ಅನುಸರಿಸಿ,
ಸನ್ನಿಹಿತರು ಆಗಿದ್ದು ಎಲ್ಲರೊಳು ಮಾಡುವರು ವ್ಯಾಪಾರ ॥ ೧೬ ॥

ಕೇಶ ಸಾಸಿರ ವಿಧ ವಿಭಾಗವ ಗೈಸಲು ಎನತು, ಅನಿತಿಹ ಸುಷುಮ್ನವು,
ಆ ಶಿರ ಅಂತದಿ ವ್ಯಾಪಿಸಿಹದು ಈ ದೇಹಮಧ್ಯದಲಿ,
ಆ ಸುಷುಮ್ನಕೆ ವಜ್ರಕ-ಆರ್ಯ-ಪ್ರಕಾಶಿನೀ-ವೈದ್ಯುತಿಗಳು ಇಹವು
ಪ್ರದೇಶದಲಿ ಪಶ್ಚಿಮಕೆ-ಉತ್ತರ-ಪೂರ್ವ-ದಕ್ಷಿಣಕೆ ॥ ೧೭ ॥

ಆ ನಳಿನ ಭವ ನಾಡಿಯೊಳಗೆ, ತ್ರಿಕೋಣ ಚಕ್ರವು ಇಪ್ಪುದು,
ಅಲ್ಲಿ ಕೃಶಾನು ಮಂಡಲ ಮಧ್ಯಗನು ಸಂಕರುಷಣ ಆಹ್ವಯನು,
ಹೀನ ಪಾಪಾತ್ಮಕ ಪುರುಷನ ದಹಾನ ಗೈಸುತ ದಿನದಿನದಿ,
ವಿಜ್ಞಾನಮಯ ಶ್ರೀವಾಸುದೇವನ ಐದಿಸುವ ಕರುಣಿ ॥ ೧೮ ॥

ಮಧ್ಯ ನಾಡಿಯ ಮಧ್ಯದಲಿ, ಹೃತ್-ಪದ್ಮ ಮೂಲದಿ ಮೂಲಪತಿ ಪದಪದ್ಮ-
ಮೂಲದಲಿ ಇಪ್ಪ ಪವನನ ಪಾದಮೂಲದಲಿ ಹೊಂದಿಕೊಂಡಿಹ ಜೀವ,
ಲಿಂಗ-ಅನಿರುದ್ಧ ದೇಹ ವಿಶಿಷ್ಟನಾಗಿ
ಕಪರ್ದಿ ಮೊದಲಾದ ಅಮರರು ಎಲ್ಲರು ಕಾದುಕೊಂಡಿಹರು ॥ ೧೯ ॥

ನಾಳ ಮಧ್ಯದಲಿ ಇಪ್ಪ ಹೃತ್-ಕೀಲಾಲ-ಜ ದೊಳಿಪ್ಪ ಅಷ್ಟದಳದಿ
ಕುಲಾಲ ಚಕ್ರದ ತೆರದಿ ಚರಿಸುತ ಹಂಸನಾಮಕನು,
ಕಾಲ ಕಾಲಗಳಲ್ಲಿ ಯೆಣ್ದೆಸೆ ಪಾಲಕರ ಕೈಸೇವೆಗೊಳುತ ಕೃಪಾಳು,
ಅವರ ಅಭಿಲಾಷೆಗಳ ಪೂರೈಸಿ ಕೊಡುತಿಪ್ಪ ॥ ೨೦ ॥

ವಾಸವ ಅನುಜ-ರೇಣುಕ ಆತ್ಮಜ-ದಾಶರಥಿ-ವೃಜಿನ ಅರ್ದನ-ಅಮಲ ಜಲಾಶಯ ಆಲಯ-
ಹಯವದನ-ಶ್ರೀಕಪಿಲ-ನರಸಿಂಹ,
ಈ ಸುರೂಪದಿ ಅವರವರ ಸಂತೋಷ ಬಡಿಸುತ ನಿತ್ಯ ಸುಖಮಯ,
ವಾಸವಾಗಿಹ ಹೃತ್-ಕಮಲದೊಳು ಬಿಂಬನು ಎಂದೆನಿಸಿ ॥ ೨೧ ॥

ಸುರಪನ ಆಲಯಕೆ ಐದಿದರೆ ಮನವು ಎರಗುವುದು ಸತ್ಪುಣ್ಯ ಮಾರ್ಗದಿ,
ಬರಲು ವಹ್ನಿಯ ಮನೆಗೆ ನಿದ್ರ ಆಲಸ್ಯ ಹಸಿ ತೃಷೆಯು,
ತರಣಿ ತನಯ ನಿಕೇತನದಿ ಸಂಭರಿತ ಕೋಪಾಟೋಪ ತೋರುವುದು,
ಅರವಿದೂರನು ನಿರ್‌ಋತಿಯಲಿರೆ ಪಾಪಗಳ ಮಾಳ್ಪ ॥ ೨೨ ॥

ವರುಣನಲ್ಲಿ ವಿನೋದ ಹಾಸ್ಯವು, ಮರುತನೊಳು ಗಮನ-ಆಗಮನ,
ಹಿಮಕರ ಧನ-ಅಧಿಪರಲ್ಲಿ ಧರ್ಮದ ಬುದ್ಧಿ ಜನಿಸುವದು,
ಹರನ ಮಂದಿರದಲ್ಲಿ ಗೋ ಧನ ಧರಣಿ ಕನ್ಯಾ ದಾನಗಳು
ಒಂದು ಅರ ಘಳಿಗೆ ತಡೆಯದಲೆ ಕೊಡುತಿಹ ಚಿತ್ತ ಪುಟ್ಟುವುದು ॥ ೨೩ ॥

ಹೃದಯದೊಳಗೆ ವಿರಕ್ತಿ, ಕೇಸರಕೆ ಒದಗೆ ಸ್ವಪ್ನ, ಸುಷುಪ್ತಿ ಲಿಂಗದಿ,
ಮಧುಹ ಕರ್ಣಿಕೆಯಲ್ಲಿ ಬರೆ ಜಾಗ್ರತೆಯು ಪುಟ್ಟುವುದು,
ಸುದರುಶನ ಮೊದಲಾದ ಅಷ್ಟ ಆಯುಧವ ಪಿಡಿದು,
ದಿಶ ಅಧಿ-ಪತಿಗಳ ಸದನದಲಿ ಸಂಚರಿಸುತ ಈಪರಿ ಬುದ್ಧಿಗಳ ಕೊಡುವ ॥ ೨೪ ॥

ಸೂತ್ರ ನಾಮಕ ಪ್ರಾಣಪತಿ ಗಾಯತ್ರಿ ಸಂ-ಪ್ರತಿಪಾದ್ಯನು ಆಗಿ ಈ ಗಾತ್ರದೊಳು ನೆಲೆಸಿರಲು
ತಿಳಿಯದೆ ಕಂಡ-ಕಂಡಲ್ಲಿ ಧಾತ್ರಿಯೊಳು ಸಂಚರಿಸಿ,
ಪುತ್ರ ಕಳತ್ರ ಸಹಿತ ಅನುದಿನದಿ
ತೀರ್ಥ ಕ್ಷೇತ್ರ ಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು ॥ ೨೫ ॥

ನಾರಸಿಂಹ ಸ್ವರೂಪದೊಳಗೆ ಶರೀರ ನಾಮದಿ ಕರೆಸುವನು,
ಹದಿನಾರು ಕಳೆಗಳು ಉಳ್ಳ ಲಿಂಗದಿ ಪುರುಷ ನಾಮಕನು,
ತೋರುವನು ಅನಿರುದ್ಧದೊಳು ಶಾಂತೀರಮಣ ಅನಿರುದ್ಧ ರೂಪದಿ,
ಪ್ರೇರಿಸುವ ಪ್ರದ್ಯುಮ್ನ ಸ್ಥೂಲ ಕಳೇವರದೊಳು ಇದ್ದು ॥ ೨೬ ॥

ಮೊದಲು ತ್ವಕ್-ಚರ್ಮಗಳು-ಮಾಂಸವು-ರುಧಿರ-ಮೇದೋ-ಮಜ್ಜವು-ಅಸ್ಥಿಗಳು
ಇದರೊಳಗೆ ಏಕ ಊನ ಪಂಚಾಶತ್ ಮರುದ್ಗಣವು,
ನಿಧನ-ಹಿಂಕಾರ-ಆದಿ-ಸಾಮಗ ಅದರ ನಾಮದಿ ಕರೆಸುತ
"ಒಂಭತ್ತು ಅಧಿಕ ನಾಲ್ವತ್ತು" ಎನಿಪ ರೂಪದಿ ಧಾತುಗಳೊಳು ಇಪ್ಪ ॥ ೨೭ ॥

ಸಪ್ತಧಾತುಗಳ ಒಳ-ಹೊರಗೆ ಸಂತಪ್ತ ಲೋಹಗತ ಆಗ್ನಿ ಯಂದದಿ,
ಸಪ್ತ ಸಾಮಗನು ಇಪ್ಪ ಅನ್ನ ಮಯಾದಿ ಕೋಶದೊಳು,
ಲಿಪ್ತ ನಾಗದೆ ತತ್ತತ್-ಆಹ್ವಯ ಕ್ಲುಪ್ತಭೋಗವ ಕೊಡುತ,
ಸ್ವಪ್ನ-ಸುಷುಪ್ತಿ-ಜಾಗ್ರತೆ ಯೀವ ತೈಜಸ-ಪ್ರಾಜ್ಞ-ವಿಶ್ವಾಖ್ಯ ॥ ೨೮ ॥

ತೀವಿಕೊಂಡಿಹವು ಅಲ್ಲಿ ಮಜ್ಜ ಕಳೇವರದಿ ಅಂಗುಳಿಯ ಪರ್ವದ ಠಾವಿನಲಿ
ಮುನ್ನೂರು ಅರವತ್ತು ಎನಿಪ ತ್ರಿಸ್ಥಳದಿ,
ಸಾವಿರದ ಎಂಭತ್ತು ರೂಪವ ಕೋವಿದರು ಪೇಳುವರು ದೇಹದಿ,
ದೇವತೆಗಳ ಒಡಗೂಡಿ ಕ್ರೀಡಿಸುವನು ರಮಾರಮಣ ॥ ೨೯ ॥

ಕೀಟ ಪೇಶಸ್ಕಾರಿ ನೆನವಿಲಿ ಕೀಟ ಭಾವವ ತೊರೆದು ತದ್ವತ್ ।
ಖೇಟ ರೂಪವನು ಐದಿ ಯಾಡುವ ತೆರದಿ,
ಭಕುತಿಯಲಿ ಕೈಟಭಾರಿಯ ಧ್ಯಾನದಿಂದ ಭವಾಟವಿಯನು ಅತಿ ಶ್ರೀಘ್ರದಿಂದಲಿ ದಾಟಿ,
ಸಾರೂಪ್ಯವನು ಐದುವರು ಅಲ್ಪ ಜೀವಿಗಳು ॥ ೩೦ ॥

ಈ ಪರೀ ದೇಹದೊಳು ಭಗವದ್ ರೂಪಗಳ ಮರೆಯದಲೆ ಮನದಿ
ಪದೋಪದೇ ಭಕುತಿಯಲಿ ಸ್ಮರಿಸುತಲಿ ಇಪ್ಪ ಭಕುತರನಾ,
ಗೋಪತಿ ಜಗನ್ನಾಥ ವಿಠಲ ಸಮೀಪಗನು ತಾನಾಗಿ,
ಸಂತತ ಸಾಪರೋಕ್ಷ್ಯಯ ಮಾಡಿ ಪೊರೆವನು ಎಲ್ಲ ಕಾಲದಲಿ ॥ ೩೧ ॥

॥ ಇತಿ ವರ್ಣಪ್ರಕ್ರಿಯ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಸರ್ವಪ್ರತೀಕ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಆವ ಪರಬೊಮ್ಮನ ಅತಿವಿಮಲ ಅಂಗಾವ ಬದ್ಧರು ಎಂದೆನಿಪ
ರಾಜೀವ ಭವ ಮೊದಲಾದ ಅಮರರು ಅನುದಿನದಿ ಹರಿ ಪದವ ಸೇವಿಪರಿಗೆ
ಅನುಕೂಲರಲ್ಲದೆ ತಾವು ಇವರನು ಕೆಡಿಸಬಲ್ಲರೆ,
ಶ್ರೀವಿಲಾಸ ಆಸ್ಪದನ ದಾಸರಿಗೆ ಉಂಟೆ ಅಪಜಯವು ॥ ೧ ॥

ಶ್ರೀದನ ಅಂಘ್ರಿ ಸರೋಜ ಯುಗಳ ಏಕಾದಶ ಸ್ಥಾನ ಆತ್ಮ ದೊಳಗಿಟ್ಟು
ಆದರದಿ ಸಂತುತಿಸಿ ಹಿಗ್ಗುವರಿಗೆ ಈ ನವಗ್ರಹವು,
ಆದಿತೇಯರು ಸಂತತ ಆಧಿ–ವ್ಯಾಧಿಗಳ ಪರಿಹರಿಸುತ ಅವರನ,
ಕಾದುಕೊಂಡಿಹರು ಎಲ್ಲರು ಒಂದಾಗಿ ಈಶನ ಆಜ್ಞೆಯಲಿ ॥ ೨ ॥

ಮೇದಿನಿಯ ಮೇಲುಳ್ಳ ಗೋಷ್–ಪಾದ ಉದಕಗಳು ಎಲ್ಲ ಅಮಲ ತೀರ್ಥವು,
ಪಾದಪ ಅದ್ರಿ ಧರಾತಳವೆ ಸುಕ್ಷೇತ್ರ, ಜೀವಗಣ ಶ್ರೀದನ ಪ್ರತಿಮೆಗಳು,
ಅವರು ಉಂಬ ಓದನವೆ ನೈವೇದ್ಯ,
ನಿತ್ಯದಿ ಹಾದಿ ನಡೆವುದೆ ನರ್ತನಗಳು ಎಂದು ಅರಿತವನೆ ಯೋಗಿ ॥ ೩ ॥

ಸರ್ವ ದೇಶವು ಪುಣ್ಯ ದೇಶವು, ಸರ್ವ ಕಾಲವು ಪರ್ವ ಕಾಲವು,
ಸರ್ವ ಜೀವರು ದಾನ ಪಾತ್ರರು ಮೂರು ಲೋಕದೊಳು,
ಸರ್ವ ಮಾತುಗಳು ಎಲ್ಲ ಮಂತ್ರವು, ಸರ್ವ ಕೆಲಸಗಳು ಎಲ್ಲ ಪೂಜೆಯು,
ಶರ್ವ ವಂದ್ಯನ ವಿಮಲ ಮೂರ್ತಿ ಧ್ಯಾನ ವುಳ್ಳವಗೆ ॥ ೪ ॥

ದೇವಖಾತ–ತಟಾಕ–ವಾಪಿ–ಸರೋವರಗಳ ಅಭಿಮಾನಿ ಸುರರು,
ಕಳೇವರದೊಳಗೆ ಇಹ ರೋಮ ಕೂಪಗಳೊಳಗೆ ತುಂಬಿಹರು,
ಆ ವಿಯತ್–ಗಂಗಾದಿ ನದಿಗಳು ಭಾವಿಸುವದು "ಎಪ್ಪತ್ತು ಎರಡು ಎನಿಪ ಸಾವಿರ"
ಸು–ನಾಡಿಗಳೊಳಗೆ ಪ್ರವಹಿಸುತಲಿಹವು ಎಂದು ॥ ೫ ॥

"ಮೂರು ಕೋಟಿಯ ಮೇಲೆ ಶೋಭಿಪ ಈರು ಅಧಿಕ ಎಪ್ಪತ್ತು ಸಾವಿರ"
ಮಾರುತ ಅಂತರ್ಯಾಮಿ ಮಾಧವ, ಪ್ರತಿ ದಿವಸದಲ್ಲಿ ತಾ ರಮಿಸುತಿಹ ನೆಂದು
ತಿಳಿದಿಹ ಸೂರಿಗಳು ದೇವತೆಗಳು,
ಅವರ ಶರೀರವೇ ಸುಕ್ಷೇತ್ರ, ಅವರ ಅರ್ಚನೆಯೆ ಹರಿಪೂಜೆ ॥ ೬ ॥

ಶ್ರೀವರನಿಗೆ ಅಭಿಷೇಕ ವೆಂದರಿದು, ಈ ವಸುಂಧರೆಯೊಳಗೆ ಬಲ್ಲವರು,
ಆವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ತಾ ವೊಲಿದು ಬಂದಲ್ಲಿ
ನೆಲೆಗೊಂಡು ಈವರು ಅಖಿಳ ಅರ್ಥಗಳನು,
ಅರಿಯದ ಜೀವರು ಅಮರ ತರಂಗಿಣಿಯನು ಐದಿದರು ಫಲವೇನು ॥ ೭ ॥

ನದ-ನದಿಗಳು ಇಳೆಯೊಳಗೆ ಪರಿವವು ಉದಧಿ ಪರಿಯಂತರದಿ,
ತರುವಾಯದಲಿ ರಮಿಸುವವು ಅಲ್ಲಿ ತನ್ಮಯವಾಗಿ ತೋರದಲೆ,
ವಿಧಿ-ನಿಷೇಧಗಳು ಆಚರಿಸುವರು ಬುಧರು,
ಭಗವದ್-ರೂಪ ಸರ್ವತ್ರದಲಿ ಚಿಂತನೆ ಬರಲು, ತ್ಯಜಿಸುವರು ಅಖಿಳ ಕರ್ಮಗಳ ॥ ೮ ॥

ಕಲಿಯೆ ಮೊದಲಾದ ಅಖಿಳ ದಾನವರ ಒಳಗೆ,
ಬ್ರಹ್ಮ-ಭವ ಆದಿ ದೇವರ್ಕಳು ನಿಯಾಮಕರಾಗಿ ಹರಿಯ ಆಜ್ಞೆಯಲಿ
ಅವರ-ಅವರ ಕಲುಷ ಕರ್ಮವ ಮಾಡಿ ಮಾಡಿಸಿ,
ಜಲರುಹ ಈಕ್ಷಣಗೆ ಅರ್ಪಿಸುತ, ನಿಶ್ಚಲ ಸು-ಭಕ್ತಿ ಜ್ಞಾನ ಪೂರ್ಣರು ಸುಖಿಪರು ಅವರೊಳಗೆ ॥ ೯ ॥

ಆವ ಜೀವರೊಳು ಇದ್ದರು ಏನು?, ಇನ್ನಾವ ಕರ್ಮವ ಮಾಡಲು ಏನು?,
ಇನ್ನಾವ ಗುಣ-ರೂಪಗಳ ಉಪಾಸನೆ ಮಾಡಲು ಏನು ಅವರು?,
ಕಾವನಯ್ಯನ ಪರಮ ಕಾರುಣ್ಯ ಅವಲೋಕನ ಬಲದಿ ಚರಿಸುವ,
ದೇವತೆಗಳನು ಮುಟ್ಟಲು ಆಪವೆ ಪಾಪ-ಕರ್ಮಗಳು ॥ ೧೦ ॥

ಪತಿಯೊಡನೆ ಮನಬಂದ ತೆರದಲಿ ಪ್ರತಿ ದಿವಸದಲಿ ರಮಿಸಿ ಮೋದಿಸಿ, ।
ಸುತರ ಪಡೆದು ಇಳೆಯೊಳು ಜಿತ ಇಂದ್ರಿಯಳು ಎಂದು ಕರೆಸುವಳು,
ಕೃತಿ-ಪತಿ ಕಥ ಅಮೃತ ಸು-ಭೋಜನ ರತ ಮಹಾತ್ಮರಿಗೆ,
ಇತರ ದೋಷ ಪ್ರತತಿಗಳು ಸಂಬಂಧಿಸುವವೇನು ಅಚ್ಯುತನ ದಾಸರಿಗೆ ॥ ೧೧ ॥

ಸೂಸಿಬಹ ನದಿಯೊಳಗೆ ತನ್ನ ಸಹಾಸ ತೋರುವೆನು ಎನುತ,
ಜಲಕೆ ಎದುರು ಈಸಿದರೆ ಕೈಸೋತು ಮುಳುಗುವ,
ಹರಿಯ ಬಿಟ್ಟವನು ಕ್ಲೇಶ ವೈದುವ, ಅನಾದಿಯಲಿ ಸಾರ್ವೇಶ ಕ್ಲುಪ್ತಿಯ ಮಾಡಿದುದ ಬಿಟ್ಟು,
ಆಶೆ ಯಿಂದಲಿ ಅನ್ಯರ ಆರಾಧಿಸುವ ಮಾನವನು ॥ ೧೨ ॥

ನಾನು–ನನ್ನದು ಎಂಬ ಜಡಮತಿ ಮಾನವನು ದಿನ–ದಿನದಿ ಮಾಡುವ,
ಸ್ನಾನ–ಜಪ–ದೇವ ಅರ್ಚನೆಯೆ ಮೊದಲಾದ ಕರ್ಮಗಳ,
ದಾನವರು ಶೆಳೆದೊಯ್ವ–ರಲ್ಲದೆ ಶ್ರೀನಿವಾಸನು ಸ್ವೀಕರಿಸ,
ಮದ್ದಾನೆ ಪಕ್ವ ಕಪಿತ್ಥ–ಫಲ ಭಕ್ಷಿಸಿದ ವೋಲಹುದು ॥ ೧೩ ॥

ಧಾತ್ರಿಯೊಳಗುಳ್ಳ ಅಖಿಳ ತೀರ್ಥ–ಕ್ಷೇತ್ರ ಚರಿಸಿದರು ಏನು,
ಪಾತ್ರ–ಅಪಾತ್ರ ವರಿತು ಅನ್ನಾದಿ ದಾನವ ಮಾಡಿ ಫಲವು ಏನು,
ಗಾತ್ರ ನಿರ್ಮಲನಾಗಿ ಮಂತ್ರ ಸ್ತೋತ್ರ ಪಠಿಸಿದರು ಏನು,
ಹರಿ ಸರ್ವತ್ರ–ಗತನು ಎಂದು ಅರಿಯದೆ ತಾ ಕರ್ತೃ ಎಂಬುವನು ॥ ೧೪ ॥

ಕಂಡ ನೀರೊಳು ಮುಳುಗಿ ದೇಹವ ದಂಡಿಸಿದ ಫಲವು ಏನು,
ದಂಡ ಕಮಂಡಲಂಗಳ ಧರಿಸಿ ಯತಿ ಯೆಂದೆನಿಸಿ ಫಲವು ಏನು,
ಅಂಡ–ಜ ಅಧಿಪನು–ಅಂಸಗನ ಪದ ಪುಂಡರೀಕದಿ ಮನವ ಹರ್ನಿಶಿ,
ಬಂಡುಣಿಯವೋಲ್–ಇರಿಸಿ ಸುಖಬಡದೆ ಇಪ್ಪ ಮಾನವನು ॥ ೧೫ ॥

ವೇದ–ಶಾಸ್ತ್ರ–ಪುರಾಣ ಕಥೆಗಳ ಓದಿ ಪೇಳಿದರು ಏನು,
ಸಕಲ ನಿಷೇಧ ಕರ್ಮಗಳ ತೊರೆದು ಸತ್–ಕರ್ಮಗಳ ಮಾಡಿ ಏನು,
ಓದನಂಗಳ ಜರಿದು ಶ್ವಾಸ ನಿರೋಧಗೈಸಿದರು ಏನು,
ಕಾಮ–ಕ್ರೋಧವ ಅಳಿಯದೆ ನಾನು–ನನ್ನದು ಯೆಂಬ ಮಾನವನು ॥ ೧೬ ॥

ಏನು ಕೇಳಿದರು ಏನು, ನೋಡಿದರು ಏನು, ಓದಿದರು ಏನು,
ಪೇಳಿದರು ಏನು, ಪಾಡಿದರು ಏನು, ಮಾಡಿದರು ಏನು, ದಿನದಿನದಿ,
ಶ್ರೀನಿವಾಸನ ಜನ್ಮ ಕರ್ಮ ಸದಾ ಅನುರಾಗದಿ ನೆನೆದು,
ತತ್–ತತ್–ಸ್ಥಾನದಲಿ ತದ್–ರೂಪ ತನ್–ನಾಮಕನ ಸ್ಮರಿಸದವ ॥ ೧೭ ॥

ಬುದ್ಧಿ ವಿದ್ಯಾ ಬಲದಿ ಪೇಳಿದ ಅಶುದ್ಧ ಕಾವ್ಯವು ಇದಲ್ಲ,
ತತ್ವ ಸು–ಪದ್ಧತಿಗಳನು ತಿಳಿದ ಮಾನವನು ಅಲ್ಲ ಬುಧರಿಂದ,
ಮಧ್ವ ವಲ್ಲಭ ತಾನೆ ಹೃದಯದೊಳು ಇದ್ದು ನುಡಿದಂದದಲಿ ನುಡಿದೆನು,
ಅಪದ್ಧಗಳ ನೋಡದಲೆ ಕಿವಿಗೊಟ್ಟು ಆಲಿಪುದು ಬುಧರು ॥ ೧೮ ॥

ಕಬ್ಬಿನೊಳಗೆ ಇಹ ರಸ ವಿದಂತನಿಗೆ ಅಬ್ಬು ಬಲ್ಲುದೆ,
ಭಾಗ್ಯ ಯೌವನ ಮಬ್ಬಿನಲಿ ಮೈ ಮರೆದವಗೆ ಹರಿ ಸುಚರಿತ–ಅಮೃತವು ಲಭ್ಯವಾಗದು,
ಹರಿ ಪದ ಅಬ್ಜದಿ ಹಬ್ಬಿದ ಅತಿ ಸದ್–ಭಕ್ತಿ ರಸ
ವುಂಡು ಉಬ್ಬಿ ಕೊಬ್ಬಿ ಸುಖ ಅಬ್ಧಿಯೊಳಗೆ ಆಡುವವಗೆ ಅಲ್ಲದಲೆ ॥ ೧೯ ॥

ಖಗ-ವರ ಧ್ವಜನ ಅಂಘ್ರಿ ಭಕುತಿಯ ಬಗೆಯನು ಅರಿಯದ ಮಾನವರಿಗೆ ಇದು,
ಒಗಟಿನ ಅಂದದಿ ತೋರುತ ಇಪ್ಪುದು ಎಲ್ಲ ಕಾಲದಲಿ,
ತ್ರಿಗುಣ ವರ್ಜಿತನ ಅಮಲ ಗುಣಗಳ ಪೊಗಳಿ ಹಿಗ್ಗುವ ಭಾಗವತರಿಗೆ,
ಮಿಗೆ ಭಕುತಿ ವಿಜ್ಞಾನ ಸುಖವಿತ್ತು ಅವರ ರಕ್ಷಿಪುದು ॥ ೨೦ ॥

ಪರಮ ತತ್ವ ರಹಸ್ಯವು ಇದು ಭೂಸುರರು ಕೇಳುವುದು ಸ-ಆದರದಿ,
ನಿಷ್ಠುರಿಗಳಿಗೆ-ಮೂಢರಿಗೆ-ಪಂಡಿತ ಮಾನಿ ಪಿಶುನರಿಗೆ-
ಅರಸಿಕರಿಗೆ ಇದು ಪೇಳ್ವುದು ಅಲ್ಲ, ಅನವರತ ಭಗವತ್-ಪಾದ
ಯುಗಳ ಅಂಬುರುಹ ಮಧುಕರನು ಎನಿಸುವರಿಗೆ ಇದನು ಅರುಪು ಮೋದದಲಿ ॥ ೨೧ ॥

ಲೋಕ ವಾರ್ತೆಯು ಇದಲ್ಲ ಪರ-ಲೋಕೈಕ-ನಾಥನ ವಾರ್ತೆ ಕೇಳ್ವರೆ,
ಕಾಕುಮನುಜರಿಗೆ ಇದು ಸಮರ್ಪಕವಾಗಿ ಸೊಗಸುವದೇ?,
ಕೋಕನದ ಪರಿಮಳವು ಷಟ್-ಪದ ಸ್ವೀಕರಿಸು-ವಂದದಲಿ,
ಜಲಚರ ಭೇಕ ಬಲ್ಲುದೆ?, ಇದರ ರಸ ಹರಿ ಭಕುತಗಲ್ಲದಲೆ? ॥ ೨೨ ॥

ಸ್ವಪ್ರಯೋಜನ ರಹಿತ, ಸಕಲೇಷ್ಟ ಪ್ರದಾಯಕ, ಸರ್ವಗುಣ ಪೂರ್ಣ ಪ್ರಮೇಯ,
ಜರಾ-ಮರಣ ವರ್ಜಿತ, ವಿಗತ ಕ್ಲೇಶ, ವಿಪ್ರ ತಮ, ವಿಶ್ವ ಆತ್ಮ,
ಘೃಣಿ, ಸೂರ್ಯ ಪ್ರಕಾಶ, ಅನಂತ ಮಹಿಮ,
ಘೃತ ಪ್ರತೀಕ ಆರಾಧಿತ ಆಂಘ್ರಿ ಸರೋಜ ಸುರರಾಜ ॥ ೨೩ ॥

ವನಚರ, ಅದ್ರಿ, ಧರಾ ಧರನೆ ಜಯ, ಮನುಜ ಮೃಗವರ ವೇಷ ಜಯ,
ವಾಮನ ತ್ರಿವಿಕ್ರಮ ದೇವ ಜಯ, ಭೃಗು-ರಾಮ ಭೂಮ ಜಯ,
ಜನಕ-ಜಾ ವಲ್ಲಭನೆ ಜಯ, ರುಗ್ಮಿಣಿ ಮನೋರಥ, ಸಿದ್ಧಿದಾಯಕ,
ಜಿನ ವಿಮೋಹಕ, ಕಲಿವಿದಾರಣ, ಜಯ ಜಯಾರಮಣ ॥ ೨೪ ॥

ಸಚ್ಚಿತ್-ಆನಂದ-ಆತ್ಮ, ಬ್ರಹ್ಮ ಕರ ಅರ್ಚಿತ ಅಂಘ್ರಿ ಸರೋಜ,
ಸುಮನಸ ಪ್ರೋಚ್ಚ, ಸನ್-ಮಂಗಳದ, ಮಧ್ವ ಅಂತ:ಕರಣ-ರೂಢ,
ಅಚ್ಯುತ, ಜಗನ್ನಾಥ ವಿಠಲ, ನಿಚ್ಚ ನೆಚ್ಚಿದ ಜನರ ಬಿಡ,
ಕಾಡ್ಗಿಚ್ಚನು ಉಂಡು ಆರಣ್ಯದೊಳು, ಗೋ ಗೋಪರನು ಕಾಯಿದಾ ॥ ೨೫ ॥

॥ ಇತಿ ಶ್ರೀ ಸರ್ವಪ್ರತೀಕ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಸ್ಥಾವರಜಂಗಮ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಪಾದುಕೆಯು, ಕಂಟಕ–ಸಿಕತ ಮೊದಲಾದವು ಅನುದಿನ ಬಾಧಿಸುವವೆ
ಏಕಾದಶ ಇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ಸಾದರದಿ ನೆನೆವವನು
ಏನು ಅಪರಾಧಗಳ ಮಾಡಿದರು ಸರಿಯೆ,
ನಿರೋಧಗೈಸವು ಮೋಕ್ಷಮಾರ್ಗಕೆ ದುರಿತ–ರಾಶಿಗಳು ॥ ೧ ॥

ಹಗಲು ನಂದಾ ದೀಪದಂದದಿ, ನಿಗಮ–ವೇದ್ಯನ ಪೂಜಿಸುತ
ಕೈಮುಗಿದು ನಾಲ್ಕರೊಳು ಒಂದು ಪುರುಷ–ಅರ್ಥವನು ಬೇಡದಲೆ,
ಜಗದುದರ ಕೊಟ್ಟುದನು ಭುಂಜಿಸು, ಮಗ–ಮಡದಿ ಪ್ರಾಣ–ಇಂದ್ರಿಯ ಆತ್ಮ ಆದಿಗಳು
ಭಗವದ್–ಅಧೀನವೆಂದು ಅಡಿಗೆ–ಅಡಿಗೆ ನೆನೆವುತಿರು ॥ ೨ ॥

ಅಸ್ವತಂತ್ರನು ಜೀವ, ಹರಿ ಸರ್ವ–ಸ್ವತಂತ್ರನು ನಿತ್ಯ ಸುಖಮಯ,
ನಿ:ಸ್ವ ಬದ್ಧ, ಅಲ್ಪಜ್ಞ ಶಕ್ತ, ಸದು:ಖ, ನಿರ್ವಿಣ್ಣ,
ಹ್ರಸ್ವ–ದೇಹಿ, ಸ–ನಾಥ ಜೀವನು, ವಿಶ್ವ ವ್ಯಾಪಕ–ಕರ್ತೃ,
ಬ್ರಹ್ಮ–ಸರಸ್ವತಿ–ಈಶ ಆದಿ ಅಮರನುತ ಹರಿಯೆಂದು ಕೊಂಡಾಡು ॥ ೩ ॥

ಮತ್ತೆ ವಿಶ್ವ ಆದಿ ಎಂಟು ರೂಪ ಒಂಭತ್ತರ ಇಂದಲಿ ಪೆಚ್ಚಿಸಲು
ಎಪ್ಪತ್ತೆರಡು ರೂಪಗಳು ಅಹವು, ಒಂದೊಂದೆ ಸಾಹಸ್ರ,
ಪೃಥ್–ಪೃಥಕು ನಾಡಿಗಳೊಳಗೆ ಸರ್ವೋತ್ತಮನ ತಿಳಿಯೆಂದು
ಭೀಷ್ಮನು ಬಿತ್ತರಿಸಿದನು ಧರ್ಮ ತನಯುಗೆ ಶಾಂತಿ ಪರ್ವದಲಿ ॥ ೪ ॥

ಎಂಟು ಪ್ರಕೃತಿಗಳೊಳಗೆ ವಿಶ್ವ ಆದಿ ಎಂಟು ರೂಪದಲಿ ಇದ್ದು
ಭಕ್ತರ ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ,
ನೆಂಟನಂದದಿ ಎಡಬಿಡದೆ ವೈಕುಂಠ ರಮಣನು
ತನ್ನವರ ನಿಷ್ಕಂಟಕ ಸುಮಾರ್ಗದಲಿ ನಡೆಸುವ, ದುರ್ಜನರ ಬಡಿವ ॥ ೫ ॥

ಸ್ವ-ರಮಣನು ಶಕ್ತಿ ಆದಿ ರೂಪದಿ ಕರಣ ಮಾನಿಗಳೊಳಗೆ ನೆಲೆಸಿದ್ದು,
ಅರವಿದೂರನು ಸ್ಥೂಲ ವಿಷಯಗಳ ಉಂಡು ಉಣಿಪ ನಿತ್ಯ,
ಅರಿಯದಲೆ ನಾನುಂಬೆನು ಎಂಬುವ ನಿರಯಗಳ ಉಂಬುವನು,
ನಿಶ್ಚಯ ಮರಳಿ ಮರಳಿ ಭವ-ಆಟವಿಯ ಸಂಚರಿಸಿ ಬಳಲುವನು ॥ ೬ ॥

ಸುರುಚಿ-ರುಚಿರ-ಸುಗಂಧ-ಸುಚಿ ಯೆಂದು ಇರುತಿಹನು ಷಡ್-ರಸಗಳೊಳು,
ಹನ್ನೆರಡು ರೂಪದಲಿ ಇಪ್ಪ ಶ್ರೀ ಭೂ ದುರ್ಗೆಯರ ಸಹಿತ,
ಸ್ವ-ರಮಣನು "ಎಪ್ಪತ್ತು ಎರಡು ಸಾವಿರ" ಸಮೀರನ ರೂಪದೊಳಗೆ ಇದ್ದು
ಉರು-ಪರಾಕ್ರಮ ಕರ್ತೃ ಎನಿಸುವ ನಾಡಿಗಳೊಳಗೆ ಇದ್ದು ॥ ೭ ॥

ನಿನ್ನ ಸರ್ವತ್ರದಲಿ ನೆನೆವವರು ಅನ್ಯ ಕರ್ಮವ ಮಾಡಿದರು ಸರಿ ।
ಪುಣ್ಯ ಕರ್ಮಗಳು ಎನಿಸುವವು ಸಂದೇಹವಿನಿತಿಲ್ಲ,
ನಿನ್ನ ಸ್ಮರಿಸದೆ ಸ್ನಾನ-ಜಪ-ಹೋಮ-ಅನ್ನ-ವಸ್ತ್ರ-ಗಜ-ಅಶ್ವ-ಭೂ-ಧನ-ಧಾನ್ಯ
ಮೊದಲಾದ ಅಖಿಳ ಧರ್ಮವ ಮಾಡಿ ಫಲವೇನು ॥ ೮ ॥

ಇಷ್ಟ ಭೋಗ್ಯ ಪದಾರ್ಥದೊಳು ಶಿಪಿ-ವಿಷ್ಟ ನಾಮದಿ ಸರ್ವ ಜೀವರ ತುಷ್ಟಿ ಬಡಿಸುವ
ದಿನ-ದಿನದಿ ಸಂತುಷ್ಟ ತಾನಾಗಿ,
ಕೋಷ್ಟದೊಳು ನೆಲೆಸಿ ಇದ್ದು ರಸಮಯ ಪುಷ್ಟಿ ಯೈದಿಸುತ ಇಂದ್ರಿಯಗಳೊಳು,
ಪ್ರೇಷ್ಟನಾಗಿದ್ದು ಎಲ್ಲ ವಿಷಯಗಳ ಉಂಬ ತಿಳಿಸದಲೆ ॥ ೯ ॥

ಕಾರಣ ಆಹ್ವಯ ಜ್ಞಾನ-ಕರ್ಮ ಪ್ರೇರಕನು ತಾನಾಗಿ ಕ್ರಿಯೆಗಳ ತೋರುವನು
ಕರ್ಮ ಇಂದ್ರಿಯ ಅಧಿಪರೊಳಗೆ ನೆಲೆಸಿದ್ದು,
ಮೂರು ಗುಣಮಯ ದ್ರವ್ಯ-ಗ ತದ್-ಆಕಾರ ತನ್ನಾಮದಲಿ ಕರೆಸುವ,
ತೋರಿಕೊಳ್ಳದೆ ಜನರ ಮೋಹಿಪ ಮೋಹಕಲ್ಪಕನು ॥ ೧೦ ॥

ದ್ರವ್ಯನು ಎನಿಸುವ ಭೂತ ಮಾತ್ರದೊಳು ಅವ್ಯಯನು,
ಕರ್ಮ ಇಂದ್ರಿಯಗಳೊಳು ಭವ್ಯ, ಸತ್-ಕ್ರಿಯ ನೆನಿಪ ಜ್ಞಾನ ಇಂದ್ರಿಯಗಳೊಳಗೆ ಇದ್ದು,
ಸ್ತವ್ಯಕಾರಕನು ಎನಿಸಿ ಸುಖಮಯ, ಸೇವ್ಯ ಸೇವ್ಯಕನು ಎನಿಸಿ ಜಗದೊಳು,
ಹವ್ಯವಾಹನನು ಅರಣಿ ಯೊಳಗೆ ಇಪ್ಪಂತೆ ಇರುತಿಪ್ಪ ॥ ೧೧ ॥

ಮನವೆ ಮೊದಲಾದ ಇಂದ್ರಿಯಗಳೊಳಗೆ ಅನಿಲದೇವನು ಶುಚಿ ಯೆನಿಸಿಕೊಂಡು
ಅನವರತ ನೆಲೆಸಿ ಇಪ್ಪ ಶುಚಿಷತ್, ಹೋತನೆಂದೆನಿಸಿ ತನುವಿನೊಳಗೆ ಇಪ್ಪನು,
ಸದಾ ವಾಮನ ಹೃಷೀಕೇಶಾಖ್ಯ ರೂಪದಲಿ
ಅನುಭವಕೆ ತಂದೀವ ವಿಷಯ-ಜ ಸುಖವ ಜೀವರಿಗೆ ॥ ೧೨ ॥

ಪ್ರೇರಕ ಪ್ರೇರ್ಯರೊಳು ಪ್ರೇರ್ಯ ಪ್ರೇರಕನು ತಾನಾಗಿ,
ಹರಿ ನಿರ್ವೈರದಿಂದ ಪ್ರವರ್ತಿಸುವ ತನ್ನಾಮ ರೂಪದಲಿ,
ತೋರಿಕೊಳ್ಳದೆ ಸರ್ವರೊಳು ಭಾಗೀರಥೀ ಜನಕನು,
ಸಕಲ ವ್ಯಾಪಾರಗಳ ತಾ ಮಾಡಿ ಮಾಡಿಸಿ ನೋಡಿ ನಗುತಿಪ್ಪ ॥ ೧೩ ॥

ಹರಿಯೆ ಮುಖ್ಯ ನಿಯಾಮಕನು ಎಂದರಿದು, ಪುಣ್ಯ-ಅಪುಣ್ಯ ಹರುಷ-ಅಹರುಷ
ಲಾಭ-ಅಲಾಭ, ಸುಖ-ದು:ಖ ಆದಿ ದ್ವಂದ್ವಗಳ,
ನಿರುತ ಅವರಂಘ್ರಿಗೆ ಸಮರ್ಪಿಸಿ ನರಕ-ಭೂ-ಸ್ವರ್ಗ-ಆಪ ವರ್ಗದಿ,
ಕರಣ ನಿಯಾಮಕನ ಸರ್ವತ್ರದಲಿ ನೆನೆವುತಿರು ॥ ೧೪ ॥

ಮಾಣವಕ ತತ್-ಫಲಗಳ ಅನುಸಂಧಾನ ವಿಲ್ಲದೆ
ಕರ್ಮಗಳ ಸ್ವ-ಇಚ್ಛಾನುಸಾರದಿ ಮಾಡಿ ಮೋದಿಸುವಂತೆ,
ಪ್ರತಿ ದಿನದಿ ಜ್ಞಾನ ಪೂರ್ವಕ ವಿಧಿ-ನಿಷೇಧಗಳು ಏನು ನೋಡದೆ ಮಾಡು,
ಕರ್ಮ ಪ್ರಧಾನ ಪುರುಷೇಶನಲಿ ಭಕುತಿಯ ಮಾಡು ಕೊಂಡಾಡು ॥ ೧೫ ॥

ಹಾನಿ-ವೃದ್ಧಿ ಜಯ-ಅಪಜಯಗಳು ಏನು ಕೊಟ್ಟುದ ಭುಂಜಿಸುತ,
ಲಕ್ಷ್ಮೀ-ನಿವಾಸನ ಕರುಣವನೆ ಸಂಪಾದಿಸು ಅನುದಿನದಿ,
ಜ್ಞಾನ ಸುಖಮಯ ತನ್ನವರ ಪರಮ ಅನುರಾಗದಿ ಸಂತೈಪ
ದೇಹ ಅನುಬಂಧಿಗಳ ಅಂತೆ ಒಳ-ಹೊರಗೆ ಇದ್ದು ಕರುಣಾಲು ॥ ೧೬ ॥

ಆ ಪರಮ ಸಕಲ ಇಂದ್ರಿಯಗಳೊಳು ವ್ಯಾಪಕನು ತಾನಾಗಿ
ವಿಷಯವ ತಾ ಪರಿಗ್ರಹಿಸುವನು ತಿಳಿಸದೆ ಸರ್ವಜೀವರೊಳು,
ಪಾಪ ರಹಿತ, ಪುರಾಣ ಪುರುಷ, ಸಮೀಪದಲಿ ನೆಲೆಸಿದ್ದು,
ನಾನಾ ರೂಪ ಧಾರಕ, ತೋರಿಕೊಳ್ಳದೆ ಕರ್ಮಗಳ ಮಾಳ್ಪ ॥ ೧೭ ॥

ಖೇ-ಚರರು ಭೂ-ಚರರು ವಾರಿ-ನಿಶಾ ಚರರೊಳು ಇದ್ದು ಅವರ ಕರ್ಮಗಳ
ಆಚರಿಸುವನು ಘನ ಮಹಿಮ ಪರಮ ಅಲ್ಪನೋಪಾದಿ,
ಗೋಚರಿಸನು ಬಹು ಪ್ರಕಾರ ಆಲೋಚನೆಯ ಮಾಡಿದರು ಮನಸಿಗೆ,
ಕೀಚಕ-ಆರಿ ಪ್ರೀಯ, ಕವಿ-ಜನ ಗೇಯ, ಮಹ ರಾಯ ॥ ೧೮ ॥

ಒಂದೆ ಗೋತ್ರ ಪ್ರವರ ಸಂಧ್ಯಾ ವಂದನೆಗಳನು ಮಾಡಿ,
ಪ್ರಾಂತಕೆ ತಂದೆ ತನಯರು ಬೇರೆ ತಮ್ಮಯ ಪೆಸರುಗೊಂಬಂತೆ,
ಒಂದೆ ದೇಹದೊಳು ಇದ್ದು, ನಿಂದ್ಯ-ಅನಿಂದ್ಯ ಕರ್ಮವ ಮಾಡಿ ಮಾಡಿಸಿ,
ಇಂದಿರೇಶನು ಸರ್ವಜೀವರೊಳು ಈಶ ನೆನಿಸುವನು ॥ ೧೯ ॥

ಕಿಟ್ಟಗಟ್ಟಿದ ಲೋಹ ಪಾವಕ ಸುಟ್ಟು ವಿಂಗಡ ಮಾಡುವಂತೆ,
ಘರಟ್ಟ ವ್ರೀಹಿಗಳೊಳು ಇಪ್ಪ ತಂಡುಲ ಕಡೆಗೆ ತೆಗೆವಂತೆ,
ವಿಠಲಾ ಎಂದು ಒಮ್ಮೆ ಮೈ-ಮರೆದು ಅಟ್ಟಹಾಸದಿ ಕರೆಯೆ,
ದುರಿತಗಳು ಅಟ್ಟುಳಿಯ ಬಿಡಿಸೆವನ, ತನ್ನೊಳಗೆ ಇಟ್ಟು ಸಲಹುವನು ॥ ೨೦ ॥

ಜಲಧಿಯೊಳು ಸ್ವೇಚ್ಛ-ಅನುಸಾರದಿ ಜಲ-ಚರ ಪ್ರಾಣಿಗಳು
ತತ್-ತತ್-ಸ್ಥಲಗಳಲಿ ಸಂತೋಷ ಬಡುತಲಿ ಸಂಚರಿಸುವಂತೆ,
ನಳಿನ ನಾಭನೊಳು, ಅಬ್ಜ ಭವ-ಮುಪ್ಪೊಳಲ ಉರಿಗ-ಮೈಗಣ್ಣ ಮೊದಲಾದ
ಹಲವು ಜೀವರಗಣವು ವರ್ತಿಸುತಿಹದು ನಿತ್ಯದಲಿ ॥ ೨೧ ॥

ವಾಸುದೇವನು ಒಳ-ಹೊರಗೆ ಅವಕಾಶದನು ತಾನಾಗಿ,
ಬಿಂಬ ಪ್ರಕಾಶಿಸುವ ತದ್-ರೂಪ ತನ್-ನಾಮದಲಿ ಸರ್ವತ್ರ,
ಈ ಸಮನ್ವಯ ವೆಂದೆನಿಪ ಸದುಪಾಸನವ ಗೈವವನು
ಮೋಕ್ಷ ಅನ್ವೇಷಿಗಳೊಳು ಉತ್ತಮನು, ಜೀವನ್-ಮುಕ್ತನ ಅವನಿಯೊಳು ॥ ೨೨ ॥

ಭೋಗ್ಯ ವಸ್ತುಗಳೊಳಗೆ ಯೋಗ್ಯ-ಅಯೋಗ್ಯ ರಸಗಳನು ಅರಿತು,
ಯೋಗ್ಯ-ಅಯೋಗ್ಯರಲಿ ನೆಲೆಸಿ ಇಪ್ಪ ಹರಿಗೆ ಸಮರ್ಪಿಸು ಅನುದಿನದಿ,
ಭಾಗ್ಯ-ಬಡತನ ಬರಲು ಹಿಗ್ಗದೆ, ಕುಗ್ಗಿ ಸೊರಗದೆ,
ಸದ್-ಭಕುತಿ ವೈರಾಗ್ಯಗಳನೇ ಮಾಡು ನೀ ನಿರ್ಭಾಗ್ಯ ನೆನಿಸದಲೆ ॥ ೨೩ ॥

ಸ್ಥಲ-ಜಲ-ಅದ್ರಿಗಳಲ್ಲಿ ಜನಿಸುವ ಫಲ-ಸುಪುಷ್ಪ-ಜ ಗಂಧರಸ
ಶ್ರೀ ತುಲಸಿ ಮೊದಲಾದ ಅಖಿಳ ಪೂಜಾ ಸಾಧನ ಪದಾರ್ಥ,
ಹಲವು ಬಗೆಯಿಂದ ಅರ್ಪಿಸುತ ಬಾಂಬೊಳೆಯ ಜನಕಗೆ,
ನಿತ್ಯ-ನಿತ್ಯದಿ ತಿಳಿವುದಿದು, ವ್ಯತಿರೇಕ ಪೂಜೆಗಳು ಎಂದು ಕೋವಿದರು ॥ ೨೪ ॥

ಶ್ರೀ-ಕರನ ಸರ್ವತ್ರದಲಿ ಅವಲೋಕಿಸುತ ಗುಣ-ರೂಪ-ಕ್ರಿಯ
ವ್ಯತಿರೇಕ ತಿಳಿಯದಲೆ ಅನ್ವಯಿಸು ಬಿಂಬನಲಿ ಮರೆಯದಲೆ,
ಸ್ವೀಕರಿಸುವನು ಕರುಣದಿಂದ ನಿರಾಕರಿಸದೆ ಕೃಪಾಳು,
ಭಕ್ತರ ಶೋಕಗಳ ಪರಿಹರಿಸಿ, ಸುಖವಿತ್ತು ಅನವರತ ಪೊರೆವ ॥ ೨೫ ॥

ಇನಿತು ವ್ಯತಿರೇಕ ಅನ್ವಯಗಳು ಎಂದು ಎನಿಪ ಪೂಜಾ ವಿಧಿಗಳನೆ ತಿಳಿದು
ಅನಿಮಿಷ ಈಶನ ತೃಪ್ತಿ ಬಡಿಸುತಲಿರು ನಿರಂತರದಿ,
ಘನ-ಮಹಿಮ ಕೈಕೊಂಡು ಸ್ಥಿತಿ-ಮೃತಿ-ಜನುಮಗಳ ಪರಿಹರಿಸಿ,
ಸೇವಕ ಜನರೊಳು ಇಟ್ಟು ಆನಂದ ಬಡಿಸುವ ಭಕ್ತ-ವತ್ಸಲನು ॥ ೨೬ ॥

ಜಲ-ಜ ನಾಭನಿಗೆ ಎರಡು ಪ್ರತಿಮೆಗಳು ಇಳೆಯೊಳಗೆ ಜಡ-ಚೇತನ ಆತ್ಮಕ,
ಚಲದೊಳು ಇರ್ಬಗೆ ಸ್ತ್ರೀ-ಪುರುಷ ಭೇದದಲಿ, ಜಡದೊಳಗೆ ತಿಳಿವುದು ಆಹಿತ ಪ್ರತಿಮೆ,
ಸಹಜ ಅಚಲಗಳು ಎಂದು ಇರ್ಬಗೆ ಪ್ರತೀಕದಿ,
ಲಲಿತ ಪಂಚತ್ರಯ ಸುಗೋಳಕವ ಅರಿತು ಭಜಿಸುತಿರು ॥ ೨೭ ॥

ವಾರಿಜ ಆಸನ-ವಾಯು-ವೀಂದ್ರ-ಉಮಾರಮಣ-ನಾಕೇಶ-ಸ್ಮರ-ಅಹಂಕಾರಿಕ
ಪ್ರಾಣ ಆದಿಗಳು ಪುರುಷರ ಕಳೇವರದಿ,
ತೋರಿಕೊಳದೆ ಅನಿರುದ್ಧ, ದೋಷ ವಿದೂರ ನಾರಾಯಣನ ರೂಪ
ಶರೀರಮಾನಿಗಳು ಆಗಿ ಭಜಿಸುತ ಸುಖವ ಕೊಡುತಿಹರು ॥ ೨೮ ॥

ಸಿರಿ-ಸರಸ್ವತಿ-ಭಾರತೀ-ಸೌಪರಣಿ-ವಾರುಣಿ-ಪಾರ್ವತೀ ಮುಖರು ಇರುತಿಹರು
ಸ್ತ್ರೀಯರೊಳಗೆ ಅಭಿಮಾನಿಗಳು ತಾವೆನಿಸಿ,
ಅರುಣ ವರ್ಣ ನಿಭಾಂಗ, ಶ್ರೀ ಸಂಕರುಷಣ ಪ್ರದ್ಯುಮ್ನ ರೂಪಗಳ
ಇರುಳು-ಹಗಲು ಉಪಾಸನವ ಗೈವುತಲೆ ಮೋದಿಪರು ॥ ೨೯ ॥

ಕೃತ ಪ್ರತೀಕದಿ ಟಂಕಿ-ಭಾರ್ಗವ-ಹುತವಹ-ಅನಿಲ ಮುಖ್ಯ ದಿವಿಜರು
ತುತಿಸಿಕೊಳುತ ಅಭಿಮಾನಿಗಳು ತಾವಾಗಿ ನೆಲೆಸಿದ್ದು,
ಪ್ರತಿ ದಿವಸ ಶ್ರೀತುಲಸಿ ಗಂಧ-ಅಕ್ಷತೆ-ಕುಸುಮ-ಫಲ-ದೀಪ-ಪಂಚ ಅಮೃತದಿ
ಪೂಜಿಪ ಭಕುತರಿಗೆ ಕೊಡುತಿಹನು ಪುರುಷಾರ್ಥ ॥ ೩೦ ॥

ನಗಗಳ ಅಭಿಮಾನಿಗಳು ಎನಿಪ ಸುರರುಗಳು,
ಸಹಜ-ಅಚಲಗಳಿಗೆ ಮಾನಿಗಳು ಎನಿಸಿ ಶ್ರೀವಾಸುದೇವನ ಪೂಜಿಸುತಲಿ ಇಹರು,
ಸ್ವಗತ ಭೇದ ವಿವರ್ಜಿತನ ನಾಲ್-ಬಗೆ ಪ್ರತೀಕದಿ ತಿಳಿದು ಪೂಜಿಸೆ,
ವಿಗತ ಸಂಸಾರ-ಅಬ್ಧಿ ದಾಟಿಸಿ ಮುಕ್ತರನು ಮಾಳ್ಪ ॥ ೩೧ ॥

ಆವ ಕ್ಷೇತ್ರಕೆ ಪೋದರು ಏನು?, ಇನ್ನು ಆವ ತೀರ್ಥದಿ ಮುಳಗಲು ಏನು?
ಇನ್ನು ಆವ ಜಪ-ತಪ-ಹೋಮ-ದಾನವ ಮಾಡಿ ಫಲವು ಏನು,
ಶ್ರೀವರ ಜಗನ್ನಾಥ ವಿಠಲನ ಈ ವಿಧದಿ ಜಂಗಮ-ಸ್ಥಾವರ ಜೀವರೊಳು
ಪರಿಪೂರ್ಣನೆಂದು ಅರಿಯದಿಹ ಮಾನವನು ॥ ೩೨ ॥

॥ ಇತಿ ಶ್ರೀ ಸ್ಥಾವರಜಂಗಮ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ನಾಡೀಪ್ರಕರಣ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ವಾಸುದೇವನು ಪ್ರಾಣಮುಖ ತತ್ವ ಈಶರಿಂದಲಿ ಸೇವೆ ಕೈಕೊಳುತ
ಈ ಶರೀರದೊಳು ಇಪ್ಪ ಮೂವತ್ತು ಆರು ಸಾಹಸ್ರ ಈ ಸುನಾಡಿಗಳೊಳಗೆ,
ಶ್ರೀ ಭೂಮೀ ಸಮೇತ ವಿಹಾರ ಗೈವ
ಪರ–ಈಶನ ಅಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು ॥ ೧ ॥

ಚರಣಗಳೊಳಿಹ ನಾಡಿಗಳು ಹನ್ನೆರಡು ಸಾವಿರ, ಮಧ್ಯ ದೇಹದೊಳು ಇರುತಿಹವು ಹದಿನಾಲ್ಕು,
ಬಾಹುಗಳೊಳಗೆ ಈರು ಎರಡು, ಶಿರದೊಳು ಆರು ಸಾಹಸ್ರ ಚಿಂತಿಸಿ,
ಇರಳು–ಹಗಲು ಅಭಿಮಾನಿ ದಿವಿಜರನು ಅರಿತು,
ಉಪಾಸನೆಗೈವರು ಇಳೆಯೊಳು ಸ್ವರ್ಗ ವಾಸಿಗಳು ॥ ೨ ॥

ಬೃಹತಿ ನಾಮಕ ವಾಸುದೇವನು ವಹಿಸಿ ಸ್ತ್ರೀ ರೂಪ
ದೋಷ ವಿರಹಿತ ಎಪ್ಪತ್ತು ಎರಡು ಸಾವಿರ ನಾಡಿಗಳೊಳಗ್ರೆ ಇದ್ದು,
ದ್ರುಹಿಣ ಮೊದಲಾದ ಅಮರಗಣ ಸನ್ಮಹಿಮ,
ಸರ್ವ ಪ್ರಾಣಿಗಳ ಮಹ ಮಹಿಮ ಸಂತೈಸುವನು ಸಂತತ ಪರಮ ಕರುಣಾಳು ॥ ೩ ॥

ನೂರು ವರುಷಕೆ ದಿವಸ ಮೂವತ್ತು ಆರು ಸಾವಿರ ವಹವು,
ನಾಡಿ ಶರೀರದೊಳಗೆ ಇನಿತಿಹವು ಎಂದರಿತು, ಒಂದು ದಿವಸದಲಿ
ಸೂರಿಗಳ ಸತ್ಕರಿಸಿದವ, ಪ್ರತಿ ವಾರದಲಿ ದಂಪತಿಗಳ ಅರ್ಚನೆ ತಾ ರಚಿಸಿದವ,
ಸತ್ಯ ಸಂಶಯವು ಇಲ್ಲವೆಂದೆಂದು ॥ ೪ ॥

ಚತುರ ವಿಂಶತಿ ತತ್ತ್ವಗಳು ತತ್–ಪತಿಗಳು ಎನಿಸುವ
ಬ್ರಹ್ಮ ಮುಖ ದೇವತೆಗಳು ಅನುದಿನ ಪ್ರತಿ–ಪ್ರತಿ ನಾಡಿಗಳೊಳು ಇರುತಿದ್ದು,
ಚತುರ ದಶ ಲೋಕದೊಳು ಜೀವ ಪ್ರತತಿಗಳ ಸಂರಕ್ಷಿಸುವ,
ಶಾಶ್ವತನ ತತ್–ತತ್–ಸ್ಥಾನದಲಿ ನೋಡುತಲೆ ಮೋದಿಪರು ॥ ೫ ॥

ಸತ್ಯ ಸಂಕಲ್ಪನು ಸದಾ ಎಪ್ಪತ್ತು ಎರಡು ಸಾಹಸ್ರದೊಳು
ಮೂವತ್ತು ನಾಲಕು ಲಕ್ಷದ ಐವತ್ತು ಆರು ಸಾಹಸ್ರ,
ಚಿತ್-ಪ್ರಕೃತಿಯ ಒಡಗೂಡಿ ಪರಮನು ನಿತ್ಯ ಮಂಗಳಮೂರ್ತಿ,
ಭಕ್ತರ ತೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಪ ॥ ೬ ॥

ಮಣಿಗಳೊಳಗಿಹ ಸೂತ್ರದಂದದಿ ಪ್ರಣವ ಪಾದ್ಯನು
ಸರ್ವ ಚೇತನ ಗಣದೊಳು ಇದ್ದು ಅನವರತ ಸಂತೈಸುವನು ತನ್ನವರ,
ಪ್ರಣತ ಕಾಮದ, ಭಕ್ತ ಚಿಂತಾಮಣಿ, ಚಿತ್-ಆನಂದೈಕ ದೇಹನು,
ಅಣು-ಮಹದ್ ಗತನು ಅಲ್ಪರ ಉಪಾದಿಯಲಿ ನೆಲೆಸಿ ಇಪ್ಪ ॥ ೭ ॥

ಈ ಸುಷುಮ್ನ ಆದಿ ಅಖಿಳ ನಾಡೀ ಕೋಶ ನಾಭೀ ಮೂಲದಲಿ
ವೃಷಣಾ ಸದನ ಮಧ್ಯದಲಿ ಇಪ್ಪದು ತುಂದಿ ನಾಮದಲಿ,
ಆ ಸರೋಜ-ಆಸನ ಮುಖರು, ಮೂಲೇಶನ ಆನಂದಾದಿ ಸುಗುಣ ಉಪಾಸನೆಯ ಗೈವುತಲಿ
ದೇಹಗಳೊಳಗೆ ಇರುತಿಹರು ॥ ೮ ॥

ಸೂರಿಗಳು ಚಿತ್ತೈಸುವುದು ಭಾಗೀರಥಿಯೆ ಮೊದಲಾದ ತೀರ್ಥಗಳು
ಈರು ಅಧಿಕ ಎಪ್ಪತ್ತು ಸಾವಿರ ನಾಡಿಗಳೊಳಿಹವು,
ಈ ರಹಸ್ಯವನು ಅಲ್ಪ ಜನರಿಗೆ ತೋರಿ ಪೇಳದೆ,
ನಾಡಿ ನದಿಯೊಳು ಧೀರರು ಅನುದಿನ ಮಜ್ಜನವ ಮಾಡುತಲೆ ಸುಖಿಸುವರು ॥ ೯ ॥

ತಿಳಿವುದು ಈ ದೇಹದೊಳಗೆ ಇಹ ಎಡ-ಬಲದ ನಾಡಿಗಳೊಳಗೆ ದಿವಿಜರು,
ಜಲಜ ಸಂಭವ-ವಾಯು-ವಾಣಿ ಆದಿಗಳು ಬಲದಲ್ಲಿ,
ಎಲರ ಉಣಿಗ-"ವಿಹಗ ಇಂದ್ರ"-"ಚಳಿವೆಟ್ಟೆ ಅಳಿಯ"-ಷಣ್ಮಹಿಶಿಯರು-
ವಾರುಣಿ-ಕುಲಿಶ ಧರ-ಕಾಮ ಆದಿಗಳು ಎಡ ಭಾಗದೊಳು ಇಹರು ॥ ೧೦ ॥

ಇಕ್ಕಲದ ಒಳಿಹ ನಾಡಿಯೊಳು ದೇವರ್ಕಳಿಂದ ಒಡನಾಡುತಲಿ
ಪೊಂಬಕ್ಕಿ ದೇರನು ಜೀವರ ಅಧಿಕಾರಾನು ಸಾರದಲಿ,
ತಕ್ಕ ಸಾಧನವ ಮಾಡಿ ಮಾಡಿಸುತ ಅಕ್ಕರದಿ ಸಂತೈಪ ಭಕ್ತರ,
ದಕ್ಕಗೊಡನು ಅಸುರರ್ಗೆ ಸತ್-ಪುಣ್ಯಗಳನು ಅಪಹರಿಪ ॥ ೧೧ ॥

ತುಂದಿ ವಿಡಿದು ಆಶಿರದ ಪರಿಯಂತ ಒಂದು ವ್ಯಾಪಿಸಿ ಇಹುದು,
ತಾವರ ಕಂದನು ಇಹನು ಅದರೊಳಗೆ, ಅದಕೆ ಈರು ಐದು ಶಾಖೆಗಳು,
ಒಂದು ಅಧಿಕ ದಶ ಕರಣದೊಳು ಸಂಬಂಧ ಗೈದಿಹವಲ್ಲಿ,
ರವಿ-ಶಶಿ-ಸಿಂಧು-ನಾಸತ್ಯ ಆದಿಗಳು ನೆಲೆಗೊಂಡು ಇಹರು ಸತತ ॥ ೧೨ ॥

ಪೊಕ್ಕಳಡಿ ವಿಡಿದು ಒಂದೆ ನಾಡಿಯು ಸುಕ್ಕದಲೆ ಧಾರಾಳ ರೂಪದಿ,
ಸಿಕ್ಕಿಹುದು ಈ ದೇಹದೊಳಗೆ ಸುಷುಮ್ನ ನಾಮದಲಿ,
ರಕ್ಕಸರನು ಒಳ ಪೊಗಗೊಡದೆ ದಶ ದಿಕ್ಕಿನ ಒಳಗೆ ಸಮೀರ ದೇವನು,
ಲೆಕ್ಕಿಸದೆ ಮತ್ತೆ ಒಬ್ಬರನು ಸಂಚರಿಪ ದೇಹದೊಳು ॥ ೧೩ ॥

ಇನಿತು ನಾಡೀ ಶಾಖೆಗಳು ತನುವಿನೊಳಗೆ ಇಹವೆಂದು ಅರಿದು ಏಕ ಆತ್ಮನು
"ದ್ವಿ ಸಪ್ತತಿ ಸಾವಿರ" ಆತ್ಮಕನು ಆಗಿ ನಾಡಿಯೊಳು,
ವನಿತೆಯಿಂದ ಒಡಗೂಡಿ ನಾರಾಯಣ ದಿವಾ-ರಾತ್ರಿಗಳಳಿ
ಈ ಪರಿ ವನಜ-ಜ ಅಂಡದೊಳು ಅಖಿಳ ಜೀವರ ಒಳಿದ್ದು ಮೋಹಿಸುವ ॥ ೧೪ ॥

ದಿನ ದಿನದಿ ವರ್ಧಿಸುವ ಕುಮುದ ಆಪ್ತನ ಮಯೂಖದ ಸೊಬಗ,
ಗತ-ಲೋಚನ ವಿಲೋಕಿಸಿ ಮೋಡ ಬಡಬಲ್ಲನೆ ನಿರಂತರದಿ?,
ಕು-ನರಗೆ ಈ ಸು-ಕಥ-ಅಮೃತದ ಭೋಜನದ ಸುಖ ದೊರಕುವದೆ?,
ಲಕ್ಷ್ಮೀ ಮನೋಹರನ ಸದ್-ಗುಣವ ಕೀರ್ತಿಪ ಭಕುತಗೆ ಅಲ್ಲದಲೆ ॥ ೧೫ ॥

ಈ ತನುವಿನೊಳಗೆ ಇಹವು ಓತ-ಪ್ರೋತ ರೂಪದಿ ನಾಡಿಗಳು,
ಪುರುಹೂತ ಮುಖರು ಅಲ್ಲಿ ಇಹರು ತಮ್ಮಿಂದ ಅಧಿಕರ ಒಡಗೂಡಿ,
ಭೀತಿಗೊಳಿಸುತ ದಾನವರ, ಸಂಘಾತ ನಾಮಕ ಹರಿಯ ಗುಣ
ಸಂ-ಪ್ರೀತಿಯಲಿ ಸದ್-ಉಪಾಸನೆಯ ಗೈವುತಲೆ ಮೋದಿಪರು ॥ ೧೬ ॥

"ಜಲ ಅಟ"-"ಕುಕ್ಕು ಅಟ"-"ಖ ಅಟ" ಜೀವರ ಕಳೆವರಗಳೊಳು ಇದ್ದು ಕಾಣಿಸಿ ಕೊಳದೆ
ತತ್-ತದ್-ರೂಪ ನಾಮಗಳಿಂದ ಕರೆಸುತಲಿ,
ಜಲರುಹ ಏಕ್ಷಣ ವಿವಿಧ ಕರ್ಮಗಳ ಅನುದಿನದಿ ಮಾಡಿ
ತತ್-ತತ್-ಫಲಗಳ ಉಣ್ಣದೆ ಸಂಚರಿಸುವನು ನಿತ್ಯ-ಸುಖ-ಪೂರ್ಣ ॥ ೧೭ ॥

ತಿಳಿದು ಉಪಾಸನೆ ಗೈವುತ ಈಪರಿ ಮಲಿನನಂತೆ ಇರು ದುರ್ಜನರ ಕಂಗಳಿಗೆ ಗೋಚರಿಸದೆ,
ವಿಪಶ್ಚಿತರ ಒಡನೆ ಗರ್ವಿಸದೆ,
ಮಳೆ-ಬಿಸಿಲು-ಹಸಿ-ತೃಷಿ-ಜಯ್-ಅಜಯ-ಖಳರ ನಿಂದ್ಯ-ಅನಿಂದ್ಯ-ಭಯಗಳಿಗೆ
ಅಳುಕದಲೆ ಮದ್ದಾನೆಯಂದದಿ ಚರಿಸು ಧರೆಯೊಳಗೆ ॥ ೧೮ ॥

ಕಾನನ-ಗ್ರಾಮಸ್ಥ ಸರ್ವ ಪ್ರಾಣಿಗಳು, ಪ್ರತಿ ದಿವಸದಲಿ
ಏನೇನು ಮಾಡುವ ಕರ್ಮಗಳು, ಹರಿ ಪೂಜೆ ಯೆಂದು ಅರಿದು ದೇನಿಸುತ,
ಸದ್-ಭಕ್ತಿಯಲಿ ಪವಮಾನ ವಂದಿತ ದೇವ ಅಂತರ ಆತ್ಮಕ
ಶ್ರೀನಿವಾಸನಿಗೆ ಅರ್ಪಿಸುತ, ಮೋದಿಸುತ, ನಲಿವುತಿರು ॥ ೧೯ ॥

ನೋ-ಕನೀಯನು, ಲೋಕದೊಳು ಶುನಿ-ಸೂಕರ ಆದಿ ಗಳೊಳಗೆ ನೆಲೆಸಿದ್ದು
ಏಕಮೇವ ಅದ್ವಿತಿಯ ಬಹುರೂಪ ಆಹ್ವಯಗಳ ಇಂದ,
ತಾ ಕರೆಸುತ ಒಳಗೆ ಇದ್ದು ತಿಳಿಸದೆ, ಶ್ರೀ ಕಮಲಭವ ಮುಖ್ಯ ಸಕಲ
ದಿವೌಕಸಗಣ ಆರಾಧ್ಯ, ಕೈಕೊಂಡು ಅನವರತ ಪೊರೆವ ॥ ೨೦ ॥

ಇನಿತು ಉಪಾಸನೆ ಗೈವುತಿಹ ಸಜ್ಜನರು, ಸಂಸಾರದಲಿ ಪ್ರತಿ-ಪ್ರತಿ ದಿನಗಳಲಿ
ಏನೇನು ಮಾಡುವುದು ಎಲ್ಲ ಹರಿಪೂಜೆ ಎನಿಸಿಕೊಂಬುದು ಸತ್ಯವು,
ಈ ಮಾತಿನಲಿ ಸಂಶಯ ಬಡುವ ನರನು ಅಲ್ಪನು ಸುನಿಶ್ಚಯ,
ಬಾಹ್ಯ ಕರ್ಮವ ಮಾಡಿ ಫಲವೇನು ॥ ೨೧ ॥

ಭೋಗ್ಯ-ಭೋಕ್ತೃ ಗಳೊಳಗೆ ಹರಿ ತಾ ಭೋಗ್ಯ-ಭೋಕ್ತನು ಎನಿಸಿ,
ಯೋಗ್ಯ-ಅಯೋಗ್ಯ ರಸಗಳ ದೇವ-ದಾನವ ಗಣಕೆ ಉಣಿಸುವನು,
ಭಾಗ್ಯನಿಧಿ ಭಕ್ತರಿಗೆ ಸದ್-ವೈರಾಗ್ಯ-ಭಕ್ತಿ-ಜ್ಞಾನ ವೀವ,
ಆಯೋಗ್ಯರಿಗೆ ದ್ವೇಷ ಆದಿಗಳ ತನ್ನಲ್ಲಿ ಕೊಡುತ ಇಪ್ಪ ॥ ೨೨ ॥

ಈ ಚತುರ್-ದಶ ಭುವನದೊಳಗೆ ಚರ-ಅಚರ ಆತ್ಮಕ ಜೀವರಲ್ಲಿ
ವಿರೋಚನ ಆತ್ಮ-ಜ ವಂಚಕನು ನೆಲೆಸಿ ಇದ್ದು ದಿನ-ದಿನದಿ,
ಯಾಚಕನು ಯೆಂದೆನಿಸಿಕೊಂಬ ಮರೀಚಿ ದಮನ, ಸು-ಹಂಸ ರೂಪ,
ನಿಷೇಚಕ ಆಹ್ವಯನು ಆಗಿ ಜನರ ಅಭಿಲಾಷೆ ಪೂರೈಪ ॥ ೨೩ ॥

"ಅನ್ನ ದ"-"ಅನ್ನಾ ದ"-"ಅನ್ನಮಯ"-"ಸ್ವಯಮ್ ಅನ್ನ", ಬ್ರಹ್ಮ ಆದಿ ಅಖಿಳ ಚೇತನಕೆ
ಅನ್ನ ಕಲ್ಪಕ ನಾಹನು ಅನಿರುದ್ಧ ಆದಿ ರೂಪದಲಿ,
ಅನ್ಯರನು ಅಪೇಕ್ಷಿಸದೆ, ಗುಣ ಕಾರುಣ್ಯ ಸಾಗರ ಸೃಷ್ಟಿಸುವನು,
ಹಿರಣ್ಯ ಗರ್ಭನೊಳು ಇದ್ದು ಪಾಲಿಸುವನು ಜಗ-ತ್ರಯವ ॥ ೨೪ ॥

ತ್ರಿ ಪದ-ತ್ರಿ ದಶಾ ಅಧ್ಯಕ್ಷ-ತ್ರಿ ಸ್ಥ-ತ್ರಿ ಪಥ ಗಾಮಿನಿ ಪಿತ-ತ್ರಿ ವಿಕ್ರಮ,
ಕೃಪಣ ವತ್ಸಲ-ಕುವಲಯ ದಳ ಶ್ಯಾಮ-ನಿಸ್ಸೀಮ,
ಅಪರಿಮಿತ ಚಿತ್ಸುಖ ಗುಣ ಆತ್ಮಕ, ವಪುಷ, ವೈಕುಂಠ ಆದಿ ಲೋಕ ಅಧಿಪ,
ತ್ರಯೀಮಯ, ತನ್ನವರ ನಿಷ್ಕಪಟದಿಂ ಪೊರೆವ ॥ ೨೫ ॥

ಲವಣ ಮಿಶ್ರಿತ ಜಲವು ತೋರ್ಪದು ಲವಣದೋಪಾದಿಯಲಿ ಜಿಹ್ವೆಗೆ,
ವಿವರ ಗೈಸಲು ಶಕ್ಯ ವಾಗುವದೇನೊ ನೋಳ್ಪರಿಗೆ,
ಸ್ವವಶ ವ್ಯಾಪೀ ಯೆನಿಸಿ, ಲಕ್ಷ್ಮೀ ಧವ, ಚರ-ಅಚರದೊಳಗೆ ತುಂಬಿಹನು,
ಅವಿದಿತನ ಸಾಕಲ್ಯ ಬಲ್ಲವರು ಆರು ಸುರರೊಳಗೆ ॥ ೨೬ ॥

ವ್ಯಾಪ್ಯನಂದದಿ ಸರ್ವಜೀವರೊಳು ಇಪ್ಪ, ಚಿನ್ಮಯ ಘೋರ ಭವ
ಸಂತಪ್ಯ ಮಾನರು ಭಜಿಸೆ ಭಕುತಿಯಳಿಂದಲಿ, ಇಹಪರದಿ ಪ್ರಾಪ್ಯ ನಾಗುವನು,
ಅವರ ಅವಗುಣಗಳ ಒಪ್ಪುಗೊಂಬನು, ಭಕ್ತ ವತ್ಸಲ ತಪ್ಪಿಸುವ
ಜನ್ಮ ಆದಿ ದೋಷಗಳ ಅವರಿಗೆ ಅನವರತ ॥ ೨೭ ॥

ಹಲವು ಬಗೆಯಲಿ ಹರಿಯ ಮನದಲಿ ಒಲಿಸಿ ನಿಲ್ಲಿಸಿ
ಏನು ಮಾಡುವ ಕೆಲಸಗಳು ಅವನ ಅಂಘ್ರಿ ಪೂಜೆಗಳು ಎಂದು ನೆನೆವುತಿರು,
ಹಲಧರ ಅನುಜ, ತಾನೆ ಸರ್ವ ಸ್ಥಲಗಳಲಿ ನೆಲೆಸಿದ್ದು,
ನಿಶ್-ಚಂಚಲ ಭಕುತಿ-ಸುಜ್ಞಾನ ಭಾಗ್ಯವ ಕೊಟ್ಟು ಸಂತೈಪ ॥ ೨೮ ॥

ದೋಷ ಗಂಧ ವಿದೂರ, ನಾನಾ ವೇಷ ಧಾರಕ, ಈ ಜಗ ತ್ರಯ ಪೋಷಕ,
ಪುರಾತನ ಪುರುಷ, ಪುರುಹೂತ ಮುಖ ವಿನುತ,
ಶೇಷವರ ಪರಿಯಂಕ ಶಯನ, ವಿಭೀಷಣ ಪ್ರಿಯ, ವಿಜಯ ಸಖ,
ಸಂತೋಷ ಬಡಿಸುವ ಜನರಿಗೆ ಇಷ್ಟ ಅರ್ಥಗಳ ಪೂರೈಸಿ ॥ ೨೯ ॥

ಶ್ರೀ ಮಹೀ ಸೇವಿತ ಪದ ಅಂಬುಜ ಭೂಮ, ಸದ್ಭಕ್ತಿ ಐಕ ಲಭ್ಯ,
ಪಿತಾಮಹ ಆದಿ ಅಮರ-ಅಸುರ ಅರ್ಚಿತ ಪಾದ ಪಂಕೇಜ,
ವಾಮ ವಾಮನ ರಾಮ, ಸಂಸಾರ ಆಮಯ ಔಷಧ, ಹೇ ಮಮ ಕುಲಸ್ವಾಮಿ,
ಸಂತೈಸು ಎನಲು ಬಂದು ಒದಗುವನು ಕರುಣಾಳು ॥ ೩೦ ॥

ದನುಜ-ದಿವಿಜರೊಳು ಇದ್ದು ಅವರವರ ಅನುಸರಿಸಿ ಕರ್ಮಗಳ ಮಾಳ್ಪನು,
ಜನನ-ಮರಣ ಆದಿ ಅಖಿಳ ದೋಷ ವಿದೂರ,
ಎವ್ಮೊಡನೆ ಜನಿಸುವನು, ಜೀವಿಸುವ, ಸಂರಕ್ಷಣೆಯ ಮಾಡುವ ಎಲ್ಲ ಕಾಲದಿ,
ಧನವ ಕಾಯ್ದಿಹ ಸರ್ಪನಂತೆ ಅನಿಮಿತ್ತ ಬಾಂಧವನು ॥ ೩೧ ॥

ಬಿಸರುಹ ಆಪ್ತ ಆಗಸದಿ ತಾನು ಉದಯಿಸಲು ವೃಕ್ಷಂಗಳ ನೆಳಲು ಪಸರಿಸುವವು
ಇಳೆಯೊಳು, ಅಸ್ತಮಿಸಲು ಅಲ್ಲ-ಅಲ್ಲೆ ಲೀನಹವು,
ಶ್ವಸನ ಮುಖ್ಯ ಅಮರ ಅಂತರಾತ್ಮಕನ ಒಷದೊಳು ಇರುತ ಇಪ್ಪವು,
ಈ ಜಗತ್ರಯ ಬಸಿರೊಳು ಇಂಬಿಟ್ಟು ಎಲ್ಲ ಕರ್ಮವ ತೋರ್ಪ ನೋಳ್ಪರಿಗೆ ॥ ೩೨ ॥

ತ್ರಿ-ಭುವನ ಐಕ ಆರಾಧ್ಯ, ಲಕ್ಷ್ಮೀ ಸುಭುಜ ಯುಗಳ ಆಲಂಗಿತ ಅಂಗ,
ಸ್ವ-ಭು, ಸುಖ ಆತ್ಮ, ಸುವರ್ಣ ವರ್ಣ, ಸುಪರ್ಣ-ವರ ವಹನ,
ಅಭಯದ ಅನಂತ ಅರ್ಕ-ಶಶಿ ಸನ್ನಿಭ, ನಿರಂಜನ, ನಿತ್ಯದಲಿ ತನಗೆ
ಅಭಿನಮಿಸುವರಿಗೆ ಈವ ಸರ್ವ ಅರ್ಥಗಳ ತಡೆಯದಲೆ ॥ ೩೩ ॥

ಕವಿಗಳಿಂದಲಿ ತಿಳಿದು ಪ್ರಾತ: ಸವನ–ಮಧ್ಯಂ ದಿನವು–
ಸಾಯಮು ಸವನಗಳ, ವಸು–ರುದ್ರರು–ಆದಿತ್ಯರೊಳು ರಾಜಿಸುವ,
ಪವನನೊಳು, ಕೃತಿ–ಜಯ–ಸುಮಾಯಾ ಧವನ ಮೂರ್ತಿ ತ್ರಯವ ಚಿಂತಿಸಿ,
ದಿವಸ ವೆಂಬ ಆಹುತಿಗಳಿಂದ ಅರ್ಚಿಸುತ ಸುಖಿಸುತಿರು ॥ ೩೪ ॥

ಚತುರ ವಿಂಶತಿ ಅಬ್ದ ವಸು ದೇವತೆಗಳೊಳು ಪ್ರದ್ಯುಮ್ನನು ಇಪ್ಪನು,
ಚತುರ ಚತ್ವಾರಿಂಶತಿ–ಗಳಲಿ ಸಂಕರುಷಣ ಆಖ್ಯ,
ಹುತವಹ ಅಕ್ಷನೊಳಿಹನು ಮಾಯ ಪತಿಯು ಹದಿನಾರು ಅಧಿಕ
ದ್ವಾ–ತ್ರಿಂಶತಿ ವರುಷಗಳಲಿ ಇಪ್ಪನು ಆದಿತ್ಯನೊಳು ಸಿತ–ಕಾಯ ॥ ೩೫ ॥

ಷೋಡಶ ಉತ್ತರ ಶತ ವರುಷದಲಿ ಷೋಡಶ ಉತ್ತರ ಶತ ಸುರೂಪದಿ,
ಕ್ರೀಡಿಸುವ ವಸು–ರುದ್ರರು–ಆದಿತ್ಯರೊಳು ಸತಿ ಸಹಿತ,
ವ್ರೀಡ–ವಿಲ್ಲದೆ ಭಜಿಪ ಭಕ್ತರ ಪೀಡಿಸುವ ದುರಿತ ಔಘಗಳ
ದೂರ ಓಡಿಸುತ, ಬಳಿಯಲಿ ಬಿಡದೆ ನೆಲೆಸಿ ಇಪ್ಪ ಭಯ–ಹಾರಿ ॥ ೩೬ ॥

"ಮೂರು ಅಧಿಕ ಎಂಭತ್ತು ಸಹಸ್ರ ಐ ನೂರ ಇಪ್ಪತ್ತು ಎನಿಪ" ರೂಪದಿ
ತೋರುತ ಇಪ್ಪ ದಿವಾ–ನಿಶ–ಅಧಿಪರೊಳಗೆ ನಿತ್ಯದಲಿ,
ಭಾರತೀ–ಪ್ರಾಣರೊಳಗೆ ಇದ್ದು ನಿವಾರಿಸುತ ಭಕ್ತರ ದುರಿತ
ಹಿಂಕಾರ–ನಿಧನ, ಪ್ರಥಮ ರೂಪದಿ ಪಿತೃಗಳನೆ ಪೊರೆವ ॥ ೩೭ ॥

ಬುದ್ಧಿ ಪೂರ್ವಕ ಉತ್ತಮ–ಉತ್ತಮ ಶುದ್ಧ ಊರ್ಣ ಅಂಬರವ
ಪಂಕದೊಳು ಅದ್ದಿ ತೆಗೆಯಲು ಲೇಪವಾಗುವದೇ ಪರೀಕ್ಷಿಸಲು,
ಪದ್ಮನಾಭನು ಸರ್ವಜೀವರೊಳು ಇದ್ದರೇನು,
ಗುಣ ತ್ರಯ–ಗಳಿಂ ಬದ್ಧನು ಆಗುವನು ಏನೋ?, ನಿತ್ಯ ಸುಖ ಆತ್ಮ ಚಿನ್ಮಯನು ॥ ೩೮ ॥

ಸಕಲ ದೋಷ ವಿದೂರ, ಶಶಿ ಪಾವಕ ಸಹಸ್ರ ಅನಂತ ಸೂರ್ಯ ಪ್ರಕರ ಸನ್ನಿಭ ಗಾತ್ರ,
ಲಕುಮಿ ಕಳತ್ರ, ಸುರ ಮಿತ್ರ ॥
ವಿಖಿನ ಸಾಂಡದೊಳು ಇಪ್ಪ, ಬ್ರಹ್ಮ ಆದಿ ಅಖಿಳ ಚೇತನ ಗಣಕೆ
ತಾನೇ ಸಖನು ಎನಿಸಿ–ಕೊಂಡು ಅಕುಟಿಲ ಆತ್ಮಕನು ಇಪ್ಪನು ಅವರಂತೆ ॥ ೩೯ ॥

ದೇಶ ಭೇದಗಳಲ್ಲಿ ಇಪ್ಪ ಆಕಾಶದೋಪಾದಿಯಲಿ, ಚೇತನ ರಾಶಿಯೊಳು ನೆಲೆಸಿಪ್ಪನು
ಅವ್ಯವಧಾನದಲಿ ನಿರುತ,
ಶ್ರೀ–ಸಹಿತ ಸರ್ವತ್ರದಿ ನಿರವಾಕಾಶ ಕೊಡುವಂದದಲಿ ಕೊಡುತ,
ನಿರಾಶೆಯಲಿ ಸರ್ವ ಅಂತರಾತ್ಮಕ ಶೋಭಿಸುವ ಸುಖದ ॥ ೪೦ ॥

ಶ್ರೀ-ವಿರಿಂಚಿ ಆದಿ ಅಮರಗಣ ಸಂ-ಸೇವಿತ ಅಂಘ್ರಿ ಸರೋಜ,
ಈ ಜಡ-ಜೀವ ರಾಶಿಗಳ ಒಳ-ಹೊರಗೆ ನೆಲೆಸಿ ಇದ್ದು ನಿತ್ಯದಲಿ,
ಸಾ-ಅವಕಾಶನು ಎನಿಸಿ, ತನ್ನ ಕಳೇವರದೊಳು ಇಂಬು-ಇಟ್ಟು ಸಲಹುವ,
ದೇವ ದೇವಕೀ-ರಮಣ, ದಾನವ ಹರಣ, ಜಿತ ಮರಣ ॥ ೪೧ ॥

ಮಾಸ ಒಂದಕೆ ಪ್ರತಿ ದಿವಸದಲಿ ಶ್ವಾಸಗಳು ಅಹವು,
"ಅಷ್ಟ ಚತ್ವಾರಿಂಶತಿ ಸಹಸ್ರ ಅಧಿಕ ಆರು ಸುಲಕ್ಷ" ಸಂಖ್ಯೆಯಲಿ,
ಹಂಸ ನಾಮಕ ಹರಿಯು, ಷೋಡಶ ಈ ಶತ, ಅಬ್ದದಿ ಭಜಿಸೆ ಒಲಿವ,
ದಯಾ-ಸಮುದ್ರ, ಕುಚೇಲಗೆ ಒಲಿದಂದದಲಿ ದಿನ-ದಿನದಿ ॥ ೪೨ ॥

ಸ್ಥೂಲ ದೇಹದೊಳು ಇದ್ದು, ವರುಷಕೆ "ಏಳು ಅಧಿಕ ಎಪ್ಪತ್ತು ಲಕ್ಷದ
ಮೇಲೆ ಎಪ್ಪತ್ತು ಆರು ಸಾವಿರ" ಶ್ವಾಸ ಜಪಗಳನು,
ಗಾಳಿ ದೇವನು ಕರುಣದಲಿ ಈರು ಏಳು ಲೋಕದೊಳು ಉಳ್ಳ
ಚೇತನ ಜಾಲದೊಳು ಮಾಡುವನು ತ್ರಿ-ಜಗದ್-ವ್ಯಾಪ್ತ, ಪರಮ-ಆಪ್ತ ॥ ೪೩ ॥

ಈರು ಎರಡು ದೇಹಗಳೊಳಗೆ ಇದ್ದು ಸಮೀರ ದೇವನು ಶ್ವಾಸ ಜಪ
"ನಾನೂರು ಅಧಿಕವು ಆಗಿಪ್ಪ ಎಂಭತ್ತು ಆರು ಸಾಹಸ್ರ" ತಾ ರಚಿಸುವನು ದಿವಸ ಒಂದಕೆ,
ಮೂರು ವಿಧ ಜೀವರೊಳಗೆ ಇದ್ದು,
ಖರಾರಿ ಕರುಣಾ ಬಲವು ಅದೆಂತುಟೊ ಪವನ-ರಾಯನೊಳು ॥ ೪೪ ॥

ಶ್ರೀಧವ ಜಗನ್ನಾಥ ವಿಠಲ ತಾ ದಯದಿ ವದನದೊಳು ನುಡಿದ ಉಪಾದಿಯಲಿ
ನಾ ನುಡಿದೆನು ಅಲ್ಲದೆ ಕೇಳಿ ಬುಧ ಜನರು,
ಸಾಧು ಲಿಂಗ ಪ್ರದರ್ಶಕರು ನಿಷೇಧ ಗೈಸಿದರೆ ಏನಹುದು?,
ಎನ್ನ ಅಪರಾಧವು ಏನು ಇದರೊಳಗೆ ಪೇಳ್ವುದು ತಿಳಿದು ಕೋವಿದರು ॥ ೪೫ ॥

॥ ಇತಿ ಶ್ರೀ ನಾಡೀಪ್ರಕರಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ನಾಮಸ್ಮರಣ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಮಕ್ಕಳ ಆಡಿಸುವಾಗ, ಮಡದಿಯೊಳು ಅಕ್ಕರದಿ ನಗುವಾಗ,
ಹಯ–ಪಲ್ಲಕ್ಕಿ–ಗಜ ಮೊದಲಾದ ವಾಹನಗಳು ಏರಿ ಮೆರೆವಾಗ,
ಬಿಕ್ಕುವಾಗ, ಆಕಳಿಸುತಲಿ ದೇವಕ್ಕಿ ತನಯನ ಸ್ಮರಿಸುತಿಹ ನರ,
ಸಿಕ್ಕ ಯಮ ದೂತರಿಗೆ ಆವ–ಆವಲ್ಲಿ ನೋಡಿದರು ॥ ೧ ॥

ಸರಿತು ಪ್ರವಹಗಳಲ್ಲಿ, ದಿವ್ಯ ಅಂಬರದಿ, ಪತ್ರ ಆದಿಯಲಿ,
ಹರುಷಾ–ಮರುಷ ವಿ–ಸ್ಮೃತಿಯಿಂದಲಿ ಆಗಲಿ, ಒಮ್ಮೆ ಬಾಯಿ ದೆರೆದು,
ಹರಿ ಹರೀ ಹರಿ ಯೆಂಬ ಎರಡು ಅಕ್ಷರ ನುಡಿದ ಮಾತ್ರದಲಿ,
ದುರಿತಗಳು ಇರದೆ ಪೋಪವು, ತೂಲ ರಾಶಿಯೊಳು ಅನಲ ಪೊಕ್ಕಂತೆ ॥ ೨ ॥

ಮಲಗು ವಾಗಲಿ, ಏಳು ವಾಗಲಿ, ಕುಳಿತು ಮಾತಾಡುತಲಿ,
ಮನೆಯೊಳು ಕೆಲಸಗಳ ಮಾಡುತಲಿ, ಮೈ ದೊಳೆ ವಾಗ, ಮೆಲು ವಾಗ,
ಕಲುಷ ದೂರನ ಸಕಲ ಠಾವಿಲಿ ತಿಳಿಯೆ, ತತ್–ತನ್–ನಾಮ ರೂಪವ ಬಳಿಯಲಿ ಇಪ್ಪನು,
ಒಂದು ಅರಕ್ಷಣ ಬಿಟ್ಟಗಲನು ಅವರ ॥ ೩ ॥

ಆವ ಕುಲದವನು ಆದಡೆ ಏನು, ಇನ್ನು ಆವ ದೇಶದೊಳು ಇದ್ದಡೆ ಏನು,
ಇನ್ನು ಆವ ಕರ್ಮವ ಮಾಡಲು ಏನು ಇನ್ನು ಆವ ಕಾಲದಲಿ,
ಶ್ರೀ–ವರನ ಸರ್ವತ್ರದಲಿ ಸಂ–ಭಾವಿಸುತ, ಪೂಜಿಸುತ, ಮೋದಿಪ
ಕೋವಿದರಿಗೆ ಉಂಟು ಏನೊ ಭಯ–ದು:ಖಾದಿ ದೋಷಗಳು ॥ ೪ ॥

ವಾಸುದೇವನ ಗುಣ ಸಮುದ್ರದೊಳು ಈಸ ಬಲ್ಲವ, ಭವ ಸಮುದ್ರ ಆಯಾಸ ವಿಲ್ಲದೆ ದಾಟುವನು
ಶೀಘ್ರದಲಿ ಜಗದ ಒಳಗೆ,
ಬೇಸರದೆ ದುರ್–ವಿಷಯಗಳ ಅಭಿಲಾಷೆಯಲಿ ಬಳಲುವವ,
ನಾನಾ ಕ್ಲೇಷಗಳನು ಅನುಭವಿಪ ಭಕ್ತಿ ಸು–ಮಾರ್ಗ ಕಾಣದಲೆ ॥ ೫ ॥

ಸ್ನಾನ-ಜಪ-ದೇವ ಅರ್ಚನೆಯು-ವ್ಯಾಖ್ಯಾನ-ಭಾರತ ಮುಖ ಮಹ ಉಪ-ಪುರಾಣ ಕಥೆಗಳ
ಪೇಳಿ ಕೇಳಿದರು ಏನು ದಿನ ದಿನದಿ,
ಜ್ಞಾನ ಕರ್ಮ ಇಂದ್ರಿಯಗಳ ಇಂದ ಏನು-ಏನು ಮಾಡುವ ಕರ್ಮಗಳು,
ಲಕ್ಷ್ಮೀ-ನಿವಾಸನ ಪೂಜೆಯೆಂದು ಅರ್ಪಿಸದ ಮಾನವನು ॥ ೬ ॥

ದೇವ ಗಂಗೆಯೊಳು ಉಳ್ಳವಗೆ ದುರಿತ ಆವಳಿಗಳು ಉಂಟೇ ವಿಚಾರಿಸೆ,
ಪಾವುಗಳ ಭಯವು ಉಂಟೆ ವಿಹಗ ಅಧಿಪನ ಮಂದಿರದಿ,
ಜೀವ ಕರ್ತೃತ್ವವನು ಮರೆದು, ಪರಾವರ ಈಶನೇ ಕರ್ತೃ ಎಂದು ಅರಿದು,
ಆವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು ॥ ೭ ॥

ಏನು ಮಾಡುವ ಪುಣ್ಯ-ಪಾಪಗಳು, ಆನೆ ಮಾಡುವೆನು ಎಂಬುವ ಅಧಮ,
ಹೀನ ಕರ್ಮಕೆ ಪಾತ್ರ ನಾ-ಪುಣ್ಯಕ್ಕೆ ಹರಿಯೆಂಬ ಮಾನವನು ಮಧ್ಯಮನು,
ದ್ವಂದ್ವಕೆ ಶ್ರೀನಿ-ವಾಸನೆ ಕರ್ತೃವೆಂದು
ಸದ ಅನುರಾಗದಿ ನೆನೆದು ಸುಖಿಸುವರೇ ನರ ಉತ್ತಮರು ॥ ೮ ॥

ಈ ಉಪಾಸನೆ ಗೈವರು ಇಳೆಯೊಳು ದೇವತೆಗಳು ಅಲ್ಲದಲೆ ನರರು ಅಲ್ಲ,
ಆವ ಬಗೆಯಿಂದ ಆದರು ಅವರ ಅರ್ಚನೆಯು ಹರಿಪೂಜೆ,
ಕೇವಲ ಪ್ರತಿಮೆಗಳು ಎನಿಪರು ರಮಾ ವಿನೋದಿಗೆ,
ಇವರ ಅನುಗ್ರಹವೇ ವರ ಅನುಗ್ರಹ ವೆನಿಸುವುದು ಮುಕ್ತಿ ಯೋಗ್ಯರಿಗೆ ॥ ೯ ॥

ತನುವೆ ನಾನು ಎಂಬುವನು, ಸತಿ-ಸುತ-ಮನೆ-ಧನ ಆದಿಗಳು ಎನ್ನದು ಎಂಬುವ,
ದ್ಯುನದಿ ಮೊದಲಾದ ಉದಕಗಳೆ ಸತ್-ತೀರ್ಥವು ಎಂಬುವನು,
ಅನಲ-ಲೋಹಾದಿ ಪ್ರತೀಕ ಅರ್ಚನವೆ ದೇವರ ಪೂಜೆ,
ಸುಜನರ ಮನುಜರು ಅಹುದು ಎಂಬುವನು, ಗೋಖರ ನೆನಿಪ ಬುಧರಿಂದ ॥ ೧೦ ॥

ಅನಲ-ಸೋಮ-ಅರ್ಕ-ಇಂದು-ತಾರ-ಅವನಿ-ಸುರ ಆಪಗ ಮುಖ್ಯ ತೀರ್ಥಗಳು-
ಅನಿಲ-ಗಗನ-ಮನ ಆದಿ ಇಂದ್ರಿಯ ಗಳಿಗೆ ಅಭಿಮಾನಿ ಎನಿಪ ಸುರರು,
ವಿಪಶ್ಚಿತರ ಸನ್-ಮನದಿ ಭಜಿಸದೆ ಯಿಪ್ಪರನ,
ಪಾವನವ ಮಾಡರು, ತಮ್ಮ ಪೂಜೆಯ ಮಾಡಿದರು ಸರಿಯೆ ॥ ೧೧ ॥

ಕೆಂಡ ಕಾಣದೆ ಮುಟ್ಟಿದರು, ಸರಿಕಂಡು ಮುಟ್ಟಲು ದಹಿಸದೆ ಇಪ್ಪುದೆ,
"ಪುಂಡರೀಕ ದಳ ಆಯತ ಅಕ್ಷನ" ವಿಮಲ ಪದ ಪದ್ಮ
ಬಂಡುಣಿಗಳು ಎಂದೆನಿಪ ಭಕ್ತರ ಹಿಂಡು ನೋಡಿದ ಮಾತ್ರದಲಿ,
ತನು ದಿಂಡು ಗೆಡಹಿದ ನರನ, ಪಾವನ ಮಾಳ್ಪರು ಆ ಕ್ಷಣದಿ ॥ ೧೨ ॥

ಈ ನಿಮಿತ್ತ ಪುನಃ-ಪುನಃ ಸು-ಜ್ಞಾನಿಗಳ ಸಹವಾಸ ಮಾಡು,
ಕು-ಮಾನವರ ಕೂಡಿ ಆಡದಿರು ಲೌಕಿಕಕೆ ಮರುಳು ಆಗಿ,
ವೈನತೇಯ ಆಂಸಗನ, ಸರ್ವ ಸ್ಥಾನದಲಿ ತನ್-ನಾಮ-ರೂಪವ ಧೇನಿಸುತ ಸಂಚರಿಸು
ಇತರ ಆಲೋಚನೆಯ ಬಿಟ್ಟು ॥ ೧೩ ॥

ಈ ನಳಿನ-ಜ ಅಂಡದೊಳು, ಸರ್ವ ಪ್ರಾಣಿ ಗಳೊಳಗೆ ಇದ್ದು ಅನವರತ
ವಿ-ಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ,
ಏನು ಕಾಣದೆ, ಸಕಲ ಕರ್ಮಗಳು ಆನೆ ಮಾಡುವೆನು ಎಂಬ ನರನು
ಕುಂಯೋನಿ ಐದುವ, ಕರ್ತೃ ಹರಿ ಎಂದವನೆ ಮುಕ್ತನಹ ॥ ೧೪ ॥

ಕಲಿ-ಮಲ ಆಪಹಳು ಎನಿಸುತಿಹ ಬಾಂಬೊಳೆಯೊಳಗೆ ಸಂಚರಿಸಿ ಬದುಕುವ
ಜಲ ಚರ ಪ್ರಾಣಿಗಳು ಬಲ್ಲವೆ ತೀರ್ಥ ಮಹಿಮೆಯನು,
ಹಲವು ಬಗೆಯಲಿ ಹರಿಯ ಕರುಣಾ ಬಲದಿ ಬಲ್ಲಿದರು ಆದ
ಬ್ರಹ್ಮ-ಅನಿಲ-"ವಿಪ ಈಶ" ಆದಿ ಅಮರರು ಅರಿಯರು ಅನಂತನ ಅಮಲ ಗುಣ ॥ ೧೫ ॥

ಶ್ರೀಲಕುಮಿ ವಲ್ಲಭನು, ಹೃತ್-ಕೀಲಾಲ-ಜ ದೊಳಿದ್ದು ಅಖಿಳ ಚೇತನ ಜಾಲವನು ಮೋಹಿಸುವ,
ತ್ರಿ-ಗುಣದಿ ಬದ್ಧರನು ಮಾಡಿ,
ಸ್ಥೂಲ ಕರ್ಮದಿ ರತರ ಮಾಡಿ, ಸ್ವ-ಲೀಲೆಗಳ ತಿಳಿಸದಲೆ,
ಭವದಿ ಕುಲಾಲ ಚಕ್ರದ ತೆರದಿ ತಿರುಗಿಸುತಿಹನು ಮಾನವರ ॥ ೧೬ ॥

ವೇದ-ಶಾಸ್ತ್ರ ವಿಚಾರ ಗೈದು, ನಿಷೇಧ ಕರ್ಮವ ತೊರೆದು ನಿತ್ಯದಿ,
ಸಾಧು ಕರ್ಮವ ಮಾಳ್ಪರಿಗೆ ಸ್ವರ್ಗ ಆದಿ ಸುಖವ ಈವ,
ಐದಿಸುವ ಪಾಪಿಗಳ ನಿರಯವ, ಖೇದ-ಮೋದ ಮನುಷ್ಯರಿಗೆ,
ದುರ್-ವಾದಿಗಳಿಗೆ ಅಂಧಂ-ತಮದಿ ಮಹ ದುಃಖಗಳನು ಉಣಿಪ ॥ ೧೭ ॥

ನಿರ್ಗುಣ ಉಪಾಸಕಗೆ ಗುಣ ಸಂಸರ್ಗ ದೋಷಗಳು ಈಯದಲೆ,
ಅಪವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರ,
ದುರ್ಗಮನು ಎಂದೆನಿಪ ತ್ರೈ-ವಿಧ್ಯರ್ಗೆ, ತ್ರಿಗುಣ ಅತೀತ,
ಸಂತತ ಸ್ವರ್ಗ-ಭೂ-ನರಕದಲಿ ಸಂಚಾರವನೆ ಮಾಡಿಸುವ ॥ ೧೮ ॥

ಮೂವರೊಳಗೆ ಇದ್ದರು ಸರಿಯೆ, ಸುಖ-ನೋವುಗಳು ಸಂಬಂಧ ವಾಗವು,
ಪಾವನಕೆ ಪಾವನ ಪರಾತ್ಪರ ಪೂರ್ಣ ಸುಖ-ವನಧಿ,
ಈ ವನರುಹ ಭವ ಅಂಡದೊಳು, ಸ್ವ-ಕಳೇವರ ತದ್-ಆಕಾರಮಾಡಿ ಪರಾವರೇಶ,
ಚರ-ಅಚರ ಆತ್ಮಕ ಲೋಕಗಳ ಪೊರೆವ ॥ ೧೯ ॥

ಈ ನಿಮಿತ್ತ ನಿರಂತರ ಸ್ವಾ-ಧೀನ ಕರ್ತೃತ್ವವನು ಮರೆದು,
ಏನು-ಏನು ಮಾಡುವದು ಎಲ್ಲ ಹರಿ ಒಳ-ಹೊರಗೆ ನೆಲೆಸಿ ಇದ್ದು ತಾನೆ ಮಾಡುವನು ಎಂದು,
ಮದ್ದ ಆನೆ ಯಂದದಿ ಸಂಚರಿಸು,
ಪವಮಾನ ವಂದಿತ ಒಂದು ಅರಕ್ಷಣ ಬಿಟ್ಟು ಅಗಲ ನಿನ್ನ ॥ ೨೦ ॥

ಹಲವು ಕರ್ಮವ ಮಾಡಿ ದೇಹವ ಬಳಲಿಸದೆ, ದಿನ-ದಿನದಿ ಹೃದಯ ಕಮಲ ಸದನದಿ
ವಿ-ರಾಜಿಸುವ ಹರಿ ಮೂರ್ತಿಯನೆ ಭಜಿಸು,
ತಿಳಿಯದೆ ಈ ಪೂಜಾ-ಪ್ರಕರಣವ-ಫಲ-ಸುಪುಷ್ಪ-ಅಗ್ರ ಉದಕ-
ಶ್ರೀ ತುಲಸಿ ಗಳನು ಅರ್ಪಿಸಲು ಒಪ್ಪನು ವಾಸುದೇವ ಸದಾ ॥ ೨೧ ॥

ಧರಣಿ ನಾರಾಯಣನು, ಉದಕದಿ ತುರಿಯ ನಾಮಕ, ಅಗ್ನಿಯೊಳು ಸಂಕರುಷಣ ಆಹ್ವಯ,
ವಾಯುಗನು ಪ್ರದ್ಯುಮ್ನ, ಅನಿರುದ್ಧ ಇರುತಿಹನು ಆಕಾಶದೊಳು,
ಮೂರು ಎರಡು ರೂಪವ ಧರಿಸಿ ಭೂತ-ಗ ಕರೆಸುವನು,
ತನ್-ನಾಮ ರೂಪದಿ ಪ್ರಜರ ಸಂತೈಪ ॥ ೨೨ ॥

ಘನಗತನು ತಾನು ಆಗಿ ನಾರಾಯಣನು ತನ್-ನಾಮದಲಿ ಕರೆಸುತ,
ವನದ ಗರ್ಭ ಉದಕದಿ ನೆಲೆಸಿಹ ವಾಸುದೇವ ಆಖ್ಯ,
ಧ್ವನಿ-ಸಿಡಿಲು ಸಂಕರುಷಣನು, ಮಿಂಚಿನೊಳು ಶ್ರೀ ಪ್ರದ್ಯುಮ್ನ,
ವೃಷ್ಟಿಯ ಹನಿಗಳೊಳಗೆ ಅನಿರುದ್ಧನು ಇಪ್ಪನು ವರುಷ ನೆಂದೆನಿಸಿ ॥ ೨೩ ॥

ಗೃಹ-ಕುಟುಂಬ-ಧನ ಆದಿಗಳ ಸನ್ನಹಗಳು ಉಳ್ಳವರು ಆಗಿ,
ವಿಹಿತ-ಅವಿಹಿತ ಧರ್ಮ-"ಸು ಕರ್ಮಗಳ" ತಿಳಿಯದಲೆ ನಿತ್ಯದಲಿ,
ಅಹರ-ಮೈಥುನ-ನಿದ್ರೆಗೆ ಒಳಗೆ ಆಗಿ ಇಹರು ಸರ್ವ ಪ್ರಾಣಿಗಳು,
ಹೃದ್-ಗುಹ ನಿವಾಸಿಯನು ಅರಿಯದಲೆ, ಭವದೊಳಗೆ ಬಳಲುವರು ॥ ೨೪ ॥

"ಜಡ ಜ" ಸಂಭವ-ಖಗ-"ಫಣಿ ಪ"-"ಕೆಂ ಜೆಡೆ" ಯರು ಇಂದ ಒಡಗೂಡಿ,
ರಾಜಿಸುತ ಅಡವಿಯೊಳಗೆ ಇಪ್ಪನು ಸದಾ ಗೋಜ-ಅದ್ರಿಜನು ಎನಿಸಿ,
ಉಡುಪನಿಂದ ಅಭಿವೃದ್ಧಿಗಳ ತಾ ಕೊಡುತ, ಪಕ್ಷಿ-ಮೃಗ-ಅಹಿಗಳ
ಕಾರ-ಒಡಲ ಕಾವನು, ತತ್-ತದ್-ಆಹ್ವಯನು ಆಗಿ ಜೀವರನ ॥ ೨೫ ॥

ಅಪರಿಮಿತ ಸನ್-ಮಹಿಮ ನರಹರಿ ವಿಪಿನದೊಳು ಸಂತೈಸುವನು,
ಕಾಶ್ಯಪಿಯನು ಅಳಿದವ ಸ್ಥಲಗಳಲಿ, ಸರ್ವತ್ರ ಕೇಶವನು,
ಖ-ಪತಿ ಗಗನದಿ, ಜಲಗಳಲಿ ಮಹ ಶಫರ ನಾಮಕ,
ಭಕ್ತರನು ನಿಷ್-ಕಪಟ ದಿಂದಲಿ ಸಲಹುವನು ಕರುಣಾಲು ದಿನ-ದಿನದಿ ॥ ೨೬ ॥

ಕಾರಣ ಅಂತರ್ಯಾಮಿ ಸ್ಥೂಲ ಅವತಾರ ವ್ಯಾಪ್ತ ಅಂಶ ಆದಿ ರೂಪಕೆ,
ಸಾರ ಶುಭ ಪ್ರವಿವಿಕ್ತ ಆನಂದ ಸ್ಥೂಲ ನಿಸ್ಸಾರ,
ಆರು ರಸಗಳನು ಅರ್ಪಿಸ ಅಲ್ಪರಿಗೆ ಈ ರಹಸ್ಯವ ಪೇಳದೆ,
ಸದ ಅಪಾರ ಮಹಿಮನ ರೂಪ ಗುಣಗಳ ನೆನೆದು ಸುಖಿಸುತಿರು ॥ ೨೭ ॥

ಜಲಗತ ಉಡುಪನ ಅಮಲ ಬಿಂಬವ, ಮೆಲುವೆವು ಎಂಬ ಅತಿ ಹರುಷ ದಿಂದಲಿ
ಜಲ ಚರ ಪ್ರಾಣಿಗಳು ನಿತ್ಯದಿ ಯತ್ನ ಗೈವಂತೆ,
ಹಲ-ಧರ-ಅನುಜ ಭೋಗ್ಯ ರಸಗಳ ನೆಲೆಯನು ಅರಿಯದೆ ಪೂಜಿಸುತ,
ಹಂಬಲಿಸುವರು ಪುರುಷ ಅರ್ಥಗಳ ಸತ್ಕುಲ-ಜರು ಆವೆಂದು ॥ ೨೮ ॥

ದೇವ-ಋಷಿ-ಗಂಧರ್ವ-ಪಿತೃ-ನರ-ದೇವ-ಮಾನವ-ದನುಜ-ಗೋ-ಅಜ-
ಖರ-ಆವಿ ಮೊದಲಾದ ಅಖಿಳ ಚೇತನ ಭೋಗ್ಯ ರಸಗಳನು,
ಯಾವದ್-ಅವಯವಗಳೊಳಗೆ ಇದ್ದು ರಮಾ-ವರನು ಸ್ವೀಕರಿಪ,
ಯಾವಜ್-ಜೀವ ಗಣಕೆ ಸ್ವ-ಯೋಗ್ಯ ರಸಗಳನು ಈವನು ಎಂದೆಂದು ॥ ೨೯ ॥

ಒರಟು ಬುದ್ಧಿಯ ಬಿಟ್ಟು, ಲೌಕಿಕ ಹರಟೆಗಳ ನೀಡಾಡಿ,
ಕಾಂಚನ-ಪರಟಿ-ಲೋಷ್ಟ ಆದಿಗಳು ಸಮವು ಎಂದು ಅರಿದು ನಿತ್ಯದಲಿ,
ಪುರುಟ ಗರ್ಭ ಅಂಡ ಉದರನು, ಸತ್-ಪುರುಷನು ಎಂದು ಎನಿಸಿ,
ಎಲ್ಲರ ಒಳಗೆ ಇದ್ದು ಉರುಟ ಕರ್ಮವ ಮಾಳ್ಪನು ಎಂದು ಅಡಿಗೆ-ಅಡಿಗೆ ನೆನೆವುತಿರು ॥ ೩೦ ॥

ಭೂ-ತಳದಿ ಜನರುಗಳು ಮರ್ಮಕ ಮಾತುಗಳನು ಆಡಿದರೆ ಸಹಿಸದೆ,
ಘಾತಿಸುವರು ಅತಿ ಕೋಪದಿಂದಲಿ ಹೆಚ್ಚರಿಪ ತೆರದಿ,
ಮಾತುಳ ಅಂತಕ ಜಾರ ಹೇ ನವನೀತ ಚೋರನೇ ಎನಲು,
ತನ್ನ ನಿಕೇತನದೊಳು ಇಟ್ಟು ಅವರ ಸಂತೈಸುವನು ಕರುಣಾಳು ॥ ೩೧ ॥

ಹರಿ ಕಥ ಅಮೃತ ಸಾರವಿದು, ಸಂತರು ಸದಾ ಚಿತ್ತೈಸುವುದು,
ನಿಷ್ಠುರಿಗಳಿಗೆ-ಪಿಶುನರಿಗೆ-ಅಯೋಗ್ಯರಿಗೆ ಇದನು ಪೇಳದಲೆ,
ನಿರುತ ಸದ್-ಭಕ್ತಿಯಲಿ ಭಗವತ್-ಚರಿತೆಗಳ ಕೊಂಡಾಡಿ ಹಿಗ್ಗುವ
ಪರಮ ಭಗವದ್-ದಾಸರಿಗೆ ತಿಳಿಸುವುದು ಈ ರಹಸ್ಯ ॥ ೩೨ ॥

ಸತ್ಯ ಸಂಕಲ್ಪನು ಸದಾ ಏನು ಇತ್ತದೇ ಪುರುಷ ಅರ್ಥ ವೆಂದು ಅರಿದು,
ಅತ್ಯಧಿಕ ಸಂತೋಷದಿಂ ನೆನೆವುತ್ತ ಭುಂಜಿಪುದು,
ನಿತ್ಯ ಸುಖ ಸಂ-ಪೂರ್ಣ ಪರಮ ಸು-ಹೃತ್ತಮ ಜಗನ್ನಾಥ ವಿಠಲ,
ಬತ್ತಿಸಿ ಭವ ಅಂಬುಧಿಯ, ಚಿತ್-ಸುಖ ವ್ಯಕ್ತಿ ಕೊಡುತ ಇಪ್ಪ ॥ ೩೩ ॥

॥ ಶ್ರೀ: ॥

## ॥ ಶ್ರೀ ಪಿತೃಗಣ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಕೃತಿರಮಣ ಪ್ರದ್ಯುಮ್ನ ವಸುದೇವತೆಗಳು ಆಹಂಕಾರ ತ್ರಯದೊಳು
ಚತುರವಿಂಶತಿ ರೂಪದಿಂದಲಿ ಭೋಜ್ಯ ನೆನಿಸುವನು,
ಹುತವಹ ಆಕ್ಷ ಅಂತರ್ಗತ ಜಯಾ ಪತಿಯು ತಾನೇ ಮೂರಧಿಕ ತ್ರಿಂಶತಿ ಸುರೂಪದಿ
ಭೋಕ್ತೃ ಎನಿಸುವ ಭೋಕ್ತೃಗಳೊಳು ಇದ್ದು ॥ ೧ ॥

ಆರು ಅಧಿಕ ಮೂವತ್ತು ರೂಪದಿ ವಾರಿ–ಜ ಆಪ್ತನೊಳು ಇರುತಿಹನು
ಮಾಯಾರಮಣ ಶ್ರೀವಾಸುದೇವನು ಕಾಲ ನಾಮದಲಿ,
ಮೂರುವಿಧ ಪಿತೃಗಳೊಳು ವಸು–ತ್ರಿಪುರ ಆರಿ–ಆದಿತ್ಯ–ಗ ಅನಿರುದ್ಧನು
ತೋರಿ ಕೊಳ್ಳದೆ ಕರ್ತೃ–ಕರ್ಮ–ಕ್ರಿಯನು ಎನಿಸಿಕೊಂಬ ॥ ೨ ॥

ಸ್ವ–ವಶ ನಾರಾಯಣನು ತಾ ಷಣ್ಣವತಿ ನಾಮದಿ ಕರೆಸುತಲಿ,
ವಸು–ಶಿವ–ದಿವಾಕರ ಕರ್ತೃ–ಕರ್ಮ–ಕ್ರಿಯೆಗಳೊಳಗೆ ಇದ್ದು,
ನೆವನ ವಿಲ್ಲದೆ ನಿತ್ಯದಲಿ ತನ್ನವರು ಮಾಡುವ ಸೇವೆ ಕೈಕೊಂಡು,
ಅವರ ಪಿತೃಗಳಿಗೆ ಈವ ಅನಂತ–ಅನಂತ ಸುಖಗಳನು ॥ ೩ ॥

ತಂತು ಪಟದಂದದಲಿ ಲಕ್ಷ್ಮೀ ಕಾಂತ ಪಂಚ ಆತ್ಮಕನು ಎನಿಸಿ
ವಸು–ಕಂತು ಹರ–ರವಿ ಕರ್ತೃಗಳೊಳು ಇದ್ದು,
ಅನವರತ ತನ್ನ ಚಿಂತಿಸುವ ಸಂತರನು ಗುರು ಮಧ್ವ ಅಂತರ ಆತ್ಮಕ ಸಂತಯಿಸುವನು,
ಸಂತತ ಅಖಿಳ ಅರ್ಥಗಳ ಪಾಲಿಸಿ ಇಹ–ಪರಂಗಳಲಿ ॥ ೪ ॥

ತಂದೆ ತಾಯ್ಗಳ ಪ್ರೀತಿಗೋಸುಗ ನಿಂದ್ಯ ಕರ್ಮವ ತೊರೆದು
ವಿಹಿತಗಳು ಒಂದು ಮೀರದೆ ಸಾಂಗ ಕರ್ಮಗಳನು ಆಚರಿಸುವವರು,
ವಂದನೀಯರು ಆಗಿ ಇಳೆಯೊಳಗೆ ದೈನಂ–ದಿನದಿ ದೈಶಿಕ ದೈಹಿಕ ಸುಖದಿಂದ ಬಾಳ್ವರು
ಬಹು ದಿವಸದಲಿ ಕೀರ್ತಿಯುತರಾಗಿ ॥ ೫ ॥

ಅಂಶಿ ಅಂಶ ಅಂತರ್ಗತ ತ್ರಯ ಹಂಸ ವಾಹನ ಮುಖ್ಯ ದಿವಿಜರ ಅಸಂಶಯದಿ ತಿಳಿದು,
ಅಂತರ ಆತ್ಮಕ ಶ್ರೀ ಜನ-ಅರ್ದನನ ಸಂಸ್ಮರಣೆ ಪೂರ್ವಕದಿ,
ಷಡ್-ಅಧಿಕ ತ್ರಿಂಶತಿ ತ್ರಯ ರೂಪವ ಅರಿತು
ವಿಪ-ಅಂಸಗನ ಪೂಜಿಸುವರು ಅವರೆ ಕೃತ-ಅರ್ಥರು ಎನಿಸುವರು ॥ ೬ ॥

"ಮೂರು-ವರೆ ಸಾವಿರದ ಮೇಲೆ ಅರೆ ನೂರು ಐದು" ರೂಪದಿ ಜನ-ಅರ್ದನ,
ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ಬಾರದಂತೆ
ಬಹುಪ್ರಕಾರ ಖರ-ಆರಿ ಕಾಪಾಡುವನು, ಸರ್ವ ಶರೀರಗಳೊಳು ಇದ್ದು
ಅವರ-ಅವರ ಪೆಸರಿಂದ ಕರೆಸುತಲಿ ॥ ೭ ॥

ಜಯ ಜಯ ಜಯಾ-ಕಾಂತ ದತ್ತಾ-ತ್ರಯ-ಕಪಿಲ-ಮಹಿದಾಸ ಭಕ್ತ ಪ್ರಿಯ,
ಪುರಾತನ ಪುರುಷ, ಪೂರ್ಣ ಆನಂದ, ಮಾನ-ಘನ,
ಹಯ-ವದನ-ಹರಿ-ಹಂಸ ಲೋಕ ತ್ರಯ ವಿಲಕ್ಷಣ,
ನಿಖಿಳ ಜಗದ ಆಶ್ರಯ, ನಿರ-ಆಮಯ, ದಯದಿ ಸಂತೈಸು ಎಂದು ಪ್ರಾರ್ಥಿಪುದು ॥ ೮ ॥

ಷಣ್ಣವತಿಯೆಂಬ ಅಕ್ಷರ ಈಢ್ಯನು ಷಣ್ಣವತಿ ನಾಮದಲಿ ಕರೆಸುತ,
ತನ್ನವರು ಸದ್-ಭಕ್ತಿ ಪೂರ್ವಕದಿಂದ ಮಾಡುತಿಹ ಪುಣ್ಯ ಕರ್ಮವ ಸ್ವೀಕರಿಸಿ,
ಕಾರುಣ್ಯ ಸಾಗರ ಸಲಹುವನು,
ಬ್ರಹ್ಮಣ್ಯ-ದೇವ, ಭವ-ಅಬ್ಧಿ-ಪೋತ, ಬಹು ಪ್ರಕಾರದಲಿ ॥ ೯ ॥

ದೇಹಗಳ ಕೊಡುವವನು ಅವರ-ಅವರ ಅಹರಗಳ ಕೊಡದಿಹನೆ,
ಸುಮನಸ ಮಹಿತ, ಮಂಗಳ ಚರಿತ, ಸದ್ಗುಣ ಭರಿತನು,
ಅನವರತ ಅಹಿಕ-ಪಾರತ್ರಿಕ ಸುಖ ಪ್ರದ, ವಹಿಸಿ ಬೆನ್ನಿಲಿ ಬೆಟ್ಟವ
ಅಮೃತವ ದ್ರುಹಿಣ ಮೊದಲಾದವರಿಗೆ ಉಣಿಸಿದ, ಮುರಿದ ನಹಿತರನ ॥ ೧೦ ॥

ದ್ರುಹಿಣ ಮೊದಲಾದ ಅಮರರಿಗೆ, ಸನ್-ಮಹಿತ ಮಾಯಾ ರಮಣ,
ತಾನೇ ಸ್ವಹ ನೆನಿಸಿ ಸಂತೃಪ್ತಿಬಡಿಸುವ ಸರ್ವಕಾಲದಲಿ,
ಪ್ರಹಿತ ಸಂಕರುಷಣನು ಪಿತೃಗಳಿಗೆ ಅಹರನೆನಿಪ ಸ್ವಧಾಖ್ಯರೂಪದಿ,
"ಮಹಿಜ ಫಲ"-ತೃಣ ಪೆಸರಿನಲಿ ಪ್ರದ್ಯುಮ್ನ-ಅನಿರುದ್ಧ ॥ ೧೧ ॥

ಅನ್ನ ನೆನಿಸುವ ನೃ-ಪಶುಗಳಿಗೆ ಹಿರಣ್ಯ ಗರ್ಭ ಅಂಡದೊಳು,
ಸಂತತ ತನ್ನನ ಈಪರಿಯಿಂದ ಉಪಾಸನೆ ಗೈವ ಭಕ್ತರನ ಬನ್ನಬಡಿಸದೆ,
ಭವ ಸಮುದ್ರ ಮಹ ಉನ್ನತಿಯ ದಾಟಿಸಿ,
ಚತುರ್ವಿಧ ಅನ್ನಮಯನು, ಆತ್ಮ ಪ್ರದರ್ಶನ ಸುಖವನು ಈವ ಹರಿ ॥ ೧೨ ॥

ಮನ–ವಚನ–ಕಾಯಗಳ ದೆಶೆಯಿಂದ ಅನುದಿನದಿ ಬಿಡದೆ ಆಚರಿಸುತ ಇಪ್ಪ
ಅನುಚಿತ–ಉಚಿತ ಕರ್ಮಗಳ ಸದ್–ಭಕ್ತಿ ಪೂರ್ವಕದಿ ಅನಿಳ ದೇವನೊಳು ಇಪ್ಪ,
ನಾರಾಯಣಗೆ ಇದು ಅನ್ನವು ಎಂದು, ಕೃಷ್ಣ ಅರ್ಪಣ ವೆನುತ ಕೊಡು,
ಸ್ವೀಕರಿಸಿ ಸಂತೈಪ ಕರುಣಾಲು ॥ ೧೩ ॥

ಏಳು ವಿಧ ಅನ್ನ ಪ್ರಕರಣವ ಕೇಳಿ ಕೋವಿದರ ಆಸ್ಯದಿಂದಲಿ,
ಆಲಸವ ಮಾಡದಲೆ ಅನಿರುದ್ಧ ಆದಿ ರೂಪಗಳ,
ಕಾಲ ಕಾಲದಿ ನೆನೆದು ಪೂಜಿಸು,  ಸ್ಥೂಲ ಮತಿಗಳಿಗೆ ಇದನು ಪೇಳದೆ,
ಶ್ರೀ ಲಕುಮಿ ವಲ್ಲಭನೆ ಅನ್ನಾದ–ಅನ್ನ–ಅನ್ನದನು ॥ ೧೪ ॥

ಎಂದು ಅರಿದು ಸಪ್ತ ಅನ್ನಗಳ ದೈನಂ–ದಿನದಿ ಮರೆಯದೆ,
ಸದಾ ಗೋವಿಂದಗೆ ಅರ್ಪಿಸು ನಿರ್ಭಯದಿ ಮಹ ಯಜ್ಞವು ಇದು ಯೆಂದು,
ಇಂದಿರ–ಈಶನು ಸ್ವೀಕರಿಸಿ ದಯದಿಂದ, ಬೇಡಿಸಿ ಕೊಳದೆ,
ತವಕದಿ ತಂದು ಕೊಡುವನು, ಪರಮ ಮಂಗಳ ತನ್ನ ದಾಸರಿಗೆ ॥ ೧೫ ॥

ಸೂಜಿ ಕರದಲಿ ಪಿಡಿದು ಸಮರವ ನಾ ಜಯಿಸುವೆನು ಎಂಬ ನರನಂತೆ,
ಈ ಜಗತ್ತಿನೊಳು ಉಳ್ಳ ಅಜ್ಞಾನಿಗಳು ನಿತ್ಯದಲಿ,
ಶ್ರೀ–ಜಗತ್–ಪತಿ ಚರಣ–ಯುಗಳ ಸರೋಜ ಭಕ್ತಿ–ಜ್ಞಾನ ಪೂರ್ವಕ ಪೂಜಿಸದೆ,
ಧರ್ಮ–ಅರ್ಥ–ಕಾಮವ ಬಯಸಿ ಬಳಲುವರು ॥ ೧೬ ॥

ಶಕಟ ಭಂಜನ, ಸಕಲ ಜೀವರ ನಿಕಟಗನು ತಾನಾಗಿ,
ಲೋಕಕೆ ಪ್ರಕಟ ನಾಗದೆ, ಸಕಲ ಕರ್ಮವ ಮಾಡಿ ಮಾಡಿಸುತ,
ಅಕುಟಿಲ ಆತ್ಮಕ, ಭಕುತ ಜನರಿಗೆ ಸುಖ–ದ ನೆನಿಸುವ ಸರ್ವಕಾಲದಿ,
ಅಕಟ–ಕಟ ಈತನ ಮಹಾ ಮಹಿಮೆಗಳಿಗೆ ಏನು ಎಂಬೆ ॥ ೧೭ ॥

ಶ್ರೀ ಲಕುಮಿವಲ್ಲಭನು, ವೈಕುಂಠ ಆಲಯದಿ, ಪ್ರಣವ–ಪ್ರಕೃತಿ–
ಕೀಲಾಲ–ಜ ಆಸನ ಮುಖ್ಯ ಚೇತನರೊಳಗೆ ನೆಲೆಸಿದ್ದು,
ಮೂಲ ಕಾರಣ ಅಂಶಿ ನಾಮದಿ ಲೀಲೆಗೈಸುತ ತೋರಿ ಕೊಳ್ಳದೆ,
ಪಾಲಿನೊಳು ಘೃತವಿದ್ದ ತೆರದಂತೆ ಇಪ್ಪ ತ್ರಿ–ಸ್ಥಳದಿ ॥ ೧೮ ॥

ಮೂರು ಯುಗದಲಿ ಮೂಲ ರೂಪನು ಸೂರಿಗಳ ಸಂತೈಸಿ,
ದಿತಿ–ಜ ಕುಮಾರಕರ ಸಂಹರಿಸಿ, ಧರ್ಮವನು ಉಳುಹಬೇಕು ಎಂದು,
ಕಾರುಣಿಕ ಭೂಮಿಯೊಳು ನಿಜ ಪರಿವಾರ ಸಹಿತ ಅವತರಿಸಿ
ಬಹು ವಿಧ ತೋರಿದನು ನರವತ್–ಪ್ರವೃತ್ತಿಯ ಸಕಲ ಚೇತನಕೆ ॥ ೧೯ ॥

ಕಾರಣ ಆಹ್ವಯ, ಪ್ರಕೃತಿಯೊಳಗೆ ಇದ್ದು "ಆರು ಅಧಿಕ ಹದಿನೆಂಟು" ತತ್ತ್ವವ
ತಾ ರಚಿಸಿ, ತದ್-ರೂಪ ತನ್-ನಾಮಂಗಳನೆ ಧರಿಸಿ,
ನೀರ-ಜ ಭವ ಅಂಡವನು ನಿರ್ಮಿಸಿ, ಕಾರುಣಿಕ, ಕಾರ್ಯ-ಆಖ್ಯ ರೂಪದಿ ತೋರುವನು,
ಸಹಜ-ಆಹಿತ-ಅಚಲಗಳಲಿ ಪ್ರತಿದಿನದಿ ॥ ೨೦ ॥

ಜೀವರ ಅಂತರ್ಯಾಮಿ ಅಂಶಿ, ಕಳೇವರಗಳೊಳಗೆ ಇಂದ್ರಿಯಗಳಲಿ
ತಾ ವಿಹಾರವ ಗೈವುತ ಅನುದಿನ ಅಂಶ ನಾಮದಲಿ,
ಈ ವಿಷಯಗಳನು ಉಂಡು ಸುಖ-ಮಯ ಈವ ಸುಖ-ಸಂಸಾರ-ದು:ಖವ,
ದೇವ-ಮಾನವ-ದಾನವರಿಗೆ ಅವಿರತ ಸುಧಾಮ-ಸಖ ॥ ೨೧ ॥

ದೇಶ-ದೇಶವ ಸುತ್ತಿ, ದೇಹ ಆಯಾಸಗೊಳಿಸದೆ, ಕಾಮ್ಯ ಕರ್ಮ ದುರ್-ಆಶೆಗೆ ಒಳಗೆ ಆಗದಲೆ,
ಬ್ರಹ್ಮ-ಆದಿ-ಅಖಿಳ ಚೇತನರು,
ಭೂ-ಸಲಿಲ-ಪಾವಕ-ಸಮೀರ-ಆಕಾಶ ಮೊದಲಾದ ಅಖಿಳ ತತ್ತ್ವ,
ಪರೇಶಗೆ ಇವು ಅಧಿಷ್ಠಾನವು ಎಂದು ಅರಿತು ಅರ್ಚಿಸು ಅನವರತ ॥ ೨೨ ॥

ಎರಡು ವಿಧದಲಿ ಲೋಕದೊಳು ಜೀವರುಗಳು ಇಪ್ಪರು ಸಂತತ,
ಕ್ಷರ-ಅಕ್ಷರ ವಿಲಿಂಗ-ಸಲಿಂಗ ಸೃಜ್ಯ-ಅಸೃಜ್ಯ ಭೇದದಲಿ ಕರೆಸುವದು,
ಜಡ ಪ್ರಕೃತಿ-ಪ್ರಣವ ಅಕ್ಷರ-ಮಹದ್ ಅಣು-ಕಾಲ ನಾಮದಿ,
ಹರಿ ಸಹಿತ ಭೇದಗಳ ಪಂಚಕ ಸ್ಮರಿಸು ಸರ್ವತ್ರ ॥ ೨೩ ॥

ಜೀವ-ಜೀವರ ಭೇದ, ಜಡ-ಜಡ, ಜೀವ-ಜಡಗಳ ಭೇದ,
ಪರಮನು ಜೀವ-ಜಡ ಸು-ವಿ-ಲಕ್ಷಣನು ಎಂದರಿದು ನಿತ್ಯದಲಿ,
ಈ ವಿರಿಂಚಿ-ಅಂಡದೊಳು ಎಲ್ಲಾ ಠಾವಿನಲಿ ತಿಳಿದು ಐದು ಭೇದ,
ಕಳೇವರದೊಳು ಅರಿತು, ಅಚ್ಯುತನ ಪದವ ಐದು ಶೀಘ್ರದಲಿ ॥ ೨೪ ॥

ಆದಿಯಲ್ಲಿ ಕ್ಷರ-ಅಕ್ಷರ ಆಖ್ಯ ದ್ವೇಧ, ಅಕ್ಷರದೊಳು ರಮಾ ಮಧು-ಸೂದನರು,
ಕ್ಷರಗಳೊಳು ಪ್ರಕೃತಿ-ಪ್ರಣವ-ಕಾಲಗಳು-ವೇಧ ಮುಖ್ಯ ತೃಣ-ಅಂತ ಜೀವರ ।
ಭೇದಗಳನು ಅರಿತು ಈ ರಹಸ್ಯವ ಬೋಧಿಸದೆ ಮಂದರಿಗೆ
ಸರ್ವತ್ರದಲಿ ಚಿಂತಿಪುದು ॥ ೨೫ ॥

ದೀಪದಿಂ ದೀಪಗಳು ಪೊರಮಟ್ಟು ಆಪಣ ಆಲಯಗಳ ತಿಮಿರಗಳ ತಾ ಪರಿಹರ ಗೈಸಿ
ತದ್-ಗತ ಪದಾರ್ಥ ತೋರ್ಪಂತೆ,
ಸೌಪರಣಿ ವರ-ವಹನು, ತಾ ಬಹು ರೂಪ ನಾಮದಿ ಎಲ್ಲ ಕಡೆಯಲಿ ವ್ಯಾಪಿಸಿ ಇದ್ದು,
ಯಥ-ಇಷ್ಟ ಮಹಿಮೆಯ ತೋರ್ಪ ತಿಳಿಸದಲೆ ॥ ೨೬ ॥

ನಳಿನ ಮಿತ್ರಗೆ ಇಂದ್ರಧನು ಪ್ರತಿ-ಫಲಿಸುವಂತೆ,
ಜಗ-ತ್ರಯವು ಕಂಗೊಳಿಪದು ಅನು-ಉಪಾಧಿಯಲಿ ಪ್ರತಿಬಿಂಬ ಆಹ್ವಯದಿ ಹರಿಗೆ,
ತಿಳಿಯೆ ತ್ರಿ-ಕಕುತ್-ಧಾಮನ ಅತಿ ಮಂಗಳ ಸುರೂಪವ,
ಸರ್ವ ಠಾವಿಲಿ ಪೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದ ಪೋಷಕನು ॥ ೨೭ ॥

ರಸ ವಿಶೇಷದೊಳು ಅತಿ ವಿಮಲ ಸಿತ ವಸನ ತೋಯಿಸಿ ಅಗ್ನಿಯೊಳಗೆ ಇಡೆ,
ಪಸರಿಸುವದು ಪ್ರಕಾಶ, ನಸಗುಂದದಲೆ ಸರ್ವತ್ರ,
ತ್ರಿಶಿರ ದೂಷಣ ವೈರಿ, ಭಕ್ತಿ ಸು-ರಸದಿ ತೋಯ್ದ ಮಹಾತ್ಮರನು,
ಬಾಧಿಸವು ಭವ-ದೊಳಗೆ ಇದ್ದರೆಯು ಸರಿ ದುರಿತ ರಾಶಿಗಳು ॥ ೨೮ ॥

ವಾರಿನಿಧಿ ಯೊಳಗೆ ಉಳ್ಳ ಅಖಿಳ ನದಿಗಳು ಬೇರೆ-ಬೇರೆ ನಿರಂತರದಿ ವಿಹಾರ ಗೈಯುತ
ಪರಮ ಮೋದದಲಿ ಇಪ್ಪ ತೆರದಂತೆ,
ಮೂರು ಗುಣಗಳ ಮಾನಿಯೆನಿಸುವ ಶ್ರೀ ರಮಾ ರೂಪಗಳು ಹರಿಯಲಿ ತೋರಿತ ಇಪ್ಪವು
ಸರ್ವ ಕಾಲದಿ ಸಮ-ರಹಿತ-ವೆನಿಸಿ ॥ ೨೯ ॥

ಕೋಕನದ ಸಖನ ಉದಯ, ಘೋಕಾ-ಲೋಕನಕೆ ಸೊಗಸದಿರೆ,
ಭಾಸ್ಕರ ತಾ ಕಳಂಕನೆ?, ಈ ಕೃತೀಪತಿ ಜಗನ್ನಾಥನಿರೆ,
ಸ್ವೀಕರಿಸಿ ಸುಖ ಬಡಲು ಅರಿಯದ ಅವಿವೇಕಿಗಳು ನಿಂದಿಸಿದರೆ ಏನಹುದು,
ಈ ಕವಿತ್ವವ ಕೇಳಿ ಸುಖ ಬಡದಿಹರೆ ಕೋವಿದರು ॥ ೩೦ ॥

ಚೇತನ-ಅಚೇತನಗಳಲಿ ಗುರು ಮಾತರಿಶ್ವ ಅಂತರ್ಗತ ಜಗನ್ನಾಥ ವಿಠಲ
ನಿರಂತರದಿ ವ್ಯಾಪಿಸಿ ತಿಳಿಸಿ ಕೊಳ್ಳದಲೆ,
ಕಾತರವ ಪುಟ್ಟಿಸಿ, ವಿಷಯದಲಿ ಯಾತು-ಧಾನರ ಮೋಹಿಸುವ,
ನಿರ್ಭೀತ, ನಿತ್ಯ ಆನಂದ-ಮಯ, ನಿರ್ದೋಷ, ನಿರವದ್ಯ ॥ ೩೧ ॥

॥ ಇತಿ ಶ್ರೀ ಪಿತೃಗಣ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ಶ್ವಾಸ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಭಾರತಿ–ಈಶನು ಘಳಿಗೆಯೊಳು "ಮುನ್ನೂರ ಅರವತ್ತು" ಸುರ ಜಪಗಳ ತಾ ರಚಿಸುವನು
ಸರ್ವ ಜೀವರೊಳು ಇದ್ದು ಬೇಸರದೆ,
ಕಾರುಣಿಕ ಅವರ–ಅವರ ಸಾಧನ ಪೂರಯಿಸಿ, ಭೂ–ಸ್ವರ್ಗ–ನರಕವ ಸೇರಿಸುವ,
ಸರ್ವಜ್ಞ ಸಕಲ ಇಷ್ಟ ಪ್ರದಾಯಕನು ॥ ೧ ॥

ತಾಸಿಗೆ "ಒಂಭೈ ನೂರು" ಶ್ವಾಸ–ಉಚ್ಛ್ವಾಸಗಳ ನಡೆಸುತಲಿ
ಚೇತನ ರಾಶಿಯೊಲು ಹಗಲು–ಇರುಳು ಜಾಗೃತನಾಗಿ ನಿತ್ಯದಲಿ,
ಈ ಸುಮನಸ–ಉತ್ತಂಸ ಲೇಶ ಆಯಾಸ ವಿಲ್ಲದೆ ಪೋಷಿಸುತ,
ಮೂಲೇಶನ ಅಂಘ್ರಿ ಸರೋಜ ಮೂಲದಲಿ ಇಪ್ಪ ಕಾಣಿಸದೆ ॥ ೨ ॥

ಅರಿವುದು ಒಂದು ಯಾಮದೊಳು ಶ್ವಾಸಗಳು "ಎರಡು ಸಾವಿರದ ಏಳ ನೂರನು",
"ಶರ ಸಹಸ್ರದ ಮೇಲೆ ನಾನೂರು" ಅಹವು ದ್ವಿತಿಯಕ್ಕೆ,
ಮರಳಿ ಯಾಮ ತ್ರಯಕೆ "ವಸು ಸಾವಿರದ ಮೇಲೆ ನೂರು" ಎಣಿಕೆಯಲಿ,
ಹನ್ನೆರಡು ತಾಸಿಗೆ "ಹತ್ತು ಸಾವಿರದ ಎಂಟು ನೂರ" ಅಹವು ॥ ೩ ॥

ಒಂದು ದಿನದೊಳಗೆ ಅನಿಳ "ಯಿಪ್ಪತ್ತು ಒಂದು ಸಾವಿರದ ಆರು ನೂರು"
ಮುಕುಂದನ ಆಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರೆವನು ಎಂದು ಪವನನ ಪೊಗಳುತಿರು,
ಯೆಂದೆಂದು ಮರೆಯದೆ, ಈ ಮಹಿಮೆ ಸಂಕ್ರಂದನ ಆದ್ಯರಿಗೆ ಉಂಟೆ?,
ನೋಡಲು ಸರ್ವ ಕಾಲದಲಿ ॥ ೪ ॥

"ಮೂರು ಲಕ್ಷದ ಮೇಲೆ ವಿಂಶತಿ ಈರು ಎರಡು ಸಾವಿರವು" ಪಕ್ಷಕೆ,
"ಆರು ಲಕ್ಷದ ಮೇಲೆ ನಾಲ್ವತ್ತು ಎಂಟು ಸಾವಿರವು" ಮಾರುತನು ಮಾಸಕೆ ಜಪಿಸಿ,
ಸಂಸಾರ ಸಾಗರದಿಂದ ಸುಜನರ ಪಾರುಗಾಣಿಸಿ
ಸಲಹುವನು ಬಹು ಭೋಗಗಳನು ಇತ್ತು ॥ ೫ ॥

ಎರಡು ತಿಂಗಳಿಗೆ ಅಹುದು ಋತು, ಭೂ ಸುರರು ತಿಳಿವುದು,
ಶ್ವಾಸ ಜಪ "ಹನ್ನೆರಡು ಲಕ್ಷದ ಮೇಲೆ ತೊಂಭತ್ತು ಆರು ಸಾಹಸ್ರ",
ಕರೆಸುವದು ಅಯನ ಆಹ್ವಯದಿ ಅರೆ ವರುಷ,
"ಮೂವತ್ತು ಎಂಟು ಲಕ್ಷ" ಈ ಪರಿ ತಿಳಿವುದು "ಎಂಭತ್ತು ಯೆಂಟು ಸಹಸ್ರ" ಕೋವಿದರು ॥ ೬ ॥

ವರುಷಕೆ ಇದರ ಇಮ್ಮಡಿ ಜಪಂಗಳ ಗುರುವರಿಯ ತಾ ಮಾಡಿ ಮಾಡಿಸಿ
ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ,
ಸುರ ವಿರೋಧಿಗಳೊಳಗೆ ನೆಲೆಸಿ ಇದ್ದು ಅರವಿದೂರ,
ತಮ ಅಧಿಕಾರಿಗಳ ಇರವರಿತು ಸೋಹಂ ಉಪಾಸನೆ ಮಾಳ್ಪನು ಅವರಂತೆ ॥ ೭ ॥

ಇನಿತು ಉಪಾಸನೆ ಸರ್ವ ಜೀವರೊಳು ಅನಿಲದೇವನು ಮಾಡುತಿರೆ,
ಚಿಂತನೆಯ ಮಾಡದೆ ಕಂಡ ನೀರೊಳು ಮುಳುಗಿ, ನಿತ್ಯದಲಿ ಮನೆಯೊಳಗೆ ಕೃಷ್ಣ ಅಜಿನ ಆದಿ
ಆಸನದಿ ಕುಳಿತು, ವಿಶಿಷ್ಟ ಬಹು ಸಜ್ಜನನು ಎನಿಸಿ,
ಜಪ ಮಣಿಗಳ ಎಣಿಸಿದರು ಏನು ಬೇಸರದೆ ॥ ೮ ॥

ಓದನ ಉದಕವು ಎರಡು ತೇಜದೊಳು ಐದುವವು ಲಯ,
ತದ್-ಅಭಿಮಾನಿಗಳು ಆದ ಶಿವ-ಪವನರು ರಮ ಆಧೀನತ್ವ ಐದಿಹರು,
ಈ ದಿವಿಜರ ಒಡಗೂಡಿ ಶ್ರೀ ಮಧುಸೂದನನ ಐದುವಳು ಯೆಂದು ಅರಿದು
ಆದರದಲಿ ಅನ್ನ-ಉದಕವ ಕೊಡುತ ಉಣುತ ಸುಖಿಸುತಿರು ॥ ೯ ॥

ಜಾಲಿ ತೊಪ್ಪಲ ಅಜ-ಆವಿಗಳು ಮೆದ್ದು ಆಲಯದಿ, ಸ್ವೇಚ್ಛ ಅನುಸಾರದಿ
ಪಾಲಗರೆವ ಅಂದದಲಿ, ಲಕ್ಷ್ಮೀ ರಮಣ, ತನ್ನವರ ಕೀಳು ಕರ್ಮವ ಸ್ವೀಕರಿಸಿ
ತನ್ನ ಆಲಯದೊಳು ಇಟ್ಟು, ಅವರ ಪೊರೆವ,
ಕೃಪಾಳು, ಕಾಮ-ದ, ಕೈರವದಳ ಶ್ಯಾಮ ಶ್ರೀರಾಮ ॥ ೧೦ ॥

ಶಶಿ-ದಿವಾಕರ-ಪಾವಕರೊಳಿಹ ಅಸಿತ-ಸಿತ-ಲೋಹಿತಗಳಲಿ
ಶಿವ-ಸ್ವಸನ-ಭಾರ್ಗವಿ ಮೂವರೊಳು ಶ್ರೀಕೃಷ್ಣ-ಹಯವದನ-ವಸುಧಿ ಪ ಅರ್ದನ
ತ್ರಿ ವೃತು ಯೆನಿಸೀ, ವಸುಮತಿಯೊಳು ಅನ್ನ-ಉದಕ-ಅನಳ ಪೆಸರಿ ನಿಂದಲಿ,
ಸರ್ವ ಜೀವರ ಸಲಹುವನು ಕರುಣಿ ॥ ೧೧ ॥

ದೀಪ ಕರದಲಿ ಪಿಡಿದು ಕಾಣದೆ ಕೂಪದೊಳು ಬಿದ್ದಂತೆ,
ವೇದ ಮಹ ಉಪನಿಷದ್ ಅರ್ಥಗಳ ನಿತ್ಯದಿ ಪೇಳುವವರು ಎಲ್ಲ,
ಶ್ರೀ ಪವನ ಮುಖ ವಿನುತನ ಅಮಲ ಸು-ರೂಪಗಳ ವ್ಯಾಪಾರ ತಿಳಿಯದೆ,
ಪಾಪ-ಪುಣ್ಯಕೆ ಜೀವ ಕರ್ತೃ, ಅಕರ್ತೃ ಹರಿಯು ಎಂಬ ॥ ೧೨ ॥

ಅನಿಲ ದೇವನು ವಾಕ್-ಮನ: ಮಯನು ಎನಿಸಿ, ಪಾವಕ-ವರುಣ-
ಸಂಕ್ರಂದನ ಮುಖ ಆದ್ಯರೊಳು ಇದ್ದು, ಭಗವದ್-ರೂಪ-ಗುಣಗಳನು
ನೆನೆ ನೆನೆದು, ಉಚ್ಚರಿಸುತಲಿ, ನಮ್ಮನು ಸದಾ ಸಂತೈಸುವವನು,
ಸನ್-ಮುನಿ ಗಣ ಆರಾಧಿತ ಪದ ಅಂಬುಜ, ಗೋಜ ಸುರರಾಜ ॥ ೧೩ ॥

ಪಾದವು ಎನಿಪವು ವಾಕ್-ಮನ್: ಮಯ, ಪಾದ ರೂಪ ದ್ವಯಗಳೊಳು
ಪ್ರಹ್ಲಾದ ಪೋಷಕ ಸಂಕರುಷಣ ಆಹ್ವಯದಿ ನೆಲೆಸಿ ಇದ್ದು,
ವೇದ ಶಾಸ್ತ್ರ ಪುರಾಣಗಳ ಸಂವಾದ ರೂಪದಿ ಮನನ ಗೈವುತ,
ಮೋದಮಯ ಸುಖ ವಿತ್ತು ಸಲಹುವ, ಸರ್ವ ಸಜ್ಜನರ ॥ ೧೪ ॥

ಗಂಧ ವಹ ದಶ ದಿಶಗಳೊಳಗೆ ಅರವಿಂದ ಸೌರಭ ಪಸರಿಸುತ,
ಘ್ರಾಣ ಇಂದ್ರಿಯಗಳಿಗೆ ಸುಖವನು ಈವುತ ಸಂಚರಿಸುವಂತೆ,
ಇಂದಿರ ಈಶನ ಸುಗುಣಗಳ ದೈನಂ-ದಿನದಿ ತುತಿಸುತ-ಅನುಮೋದಿಸುತ,
ಅಂಧ-ಬಧಿರ-ಸುಮೂಕನಂತೆ ಇರು, ಮಂದ ಜನರ ಒಡನೆ ॥ ೧೫ ॥

ಶ್ರೀರಮಣನ ಅರ ಮನೆಯ ಪೂರ್ವ ದ್ವಾರದಲ್ಲಿ ಇಹ ಸಂಜ್ಞ-ಸೂರ್ಯಗ
ಭಾರತೀ ಪತಿ ಪ್ರಾಣನ ಒಳಗಿಹ ಲಕುಮಿ ನರಯಣನ ಸೇರಿ ಮನುಜ ಉತ್ತಮರು,
ಸರ್ವ ಶರೀರ ಗತ ನಾರಾಯಣನ ಅವತಾರ ಗುಣಗಳ ತುತಿಸುತಲಿ,
ಮೋದಿಪರು ಮುಕ್ತಿಯಲಿ ॥ ೧೬ ॥

ಪ್ರಣವ ಪ್ರತಿ ಪಾದ್ಯನ ಪುರದ ದಕ್ಷಿಣ ಕವಾಟದಲಿ ಇಪ್ಪ
ಶಶಿ-ರೋಹಿಣಿಗತ ವ್ಯಾನ-ಸ್ಥ ಕೃತಿ ಪ್ರದ್ಯುಮ್ನ ರೂಪವನು,
ಗುಣಗಳನು ಸಂ-ಸ್ತುತಿಸುತಲಿ ಪಿತೃ ಗಣ, ಗಧಾ-ಧರನ ಅತಿವಿಮಲ ಪಟ್ಟಣದ ಒಳಗೆ,
ಸ್ವೇಚ್ಛ ಅನುಸಾರದಿ ಸಂಚರಿಸುತಿಹರು ॥ ೧೭ ॥

ಅಮಿತ ವಿಕ್ರಮನ ಆಲಯದ ಪಶ್ಚಿಮ ಕವಾಟದಿ, ಸತಿಸಹಿತ ಸಂಭ್ರಮದಿ
ಭಗವದ್-ಗುಣಗಳನೆ ಪೊಗಳುತಲಿ ಮೋದಿಸುವ,
ಸುಮನಸ ಆಸ್ಯನ ಒಳಿಪ್ಪ ಅಪಾನಗ ದಮನ ಸಂಕರುಷಣನ,
ನಿಜ ಹೃತ್-ಕಮಲದೊಳು ಧೇನಿಸುವ ಋಷಿಗಣವ ಐದಿ ಸುಖಿಸುವರು ॥ ೧೮ ॥

ಸ್ವ-ರಮಣನ ಗುಣ ರೂಪ ಸಪ್ತ ಸ್ವರಗಳ ಇಂದಲಿ ಪಾಡುತಿಹ
ತುಂಬುರನೆ ಮೊದಲಾದ ಅಖಿಳ ಗಂಧರ್ವರು,
ರಮಾಪತಿಯ ಪುರದ ಉತ್ತರ ಬಾಗಿಲ ಅಧಿಪ, ಸುರಪ-ಶಚಿಗ ಸಮಾನ ವಾಯುಗ
ಹರಿನ್-ಮಣಿ-ನಿಭ ಶಾಂತಿ-ಪತಿ ಅನಿರುದ್ಧನ ಐದುವರು ॥ ೧೯ ॥

ಗರುಡ–ಶೇಷ–ಅಮರ ಇಂದ್ರಮುಖ ಪುಷ್ಕರನೆ ಕಡೆಯಾಗಿ ಇಪ್ಪ ಅಖಿಳ ನಿರ್ಜರರು,
ಊರ್ಧ್ವ ದ್ವಾರಗತ ಭಾರತಿ ಉದಾನದೊಳು ಮೆರೆವ ಮಾಯಾ ವಾಸುದೇವನ
ಪರಮ ಮಂಗಳ ಅವಯುವಗಳ ಮಂದಿರವನು ಐದಿ,
ಸದಾ ಮುಕುಂದನ ನೋಡಿ ಸುಖಿಸುವರು ॥ ೨೦ ॥

ದ್ವಾರ ಪಂಚಕ ಪಾಲರೊಳಗೆ ಇಹ ಭಾರತೀ ಪ್ರಾಣ ಅಂತರ ಆತ್ಮಕ,
ಮಾ–ರಮಣನ ಐ ರೂಪ ತತ್–ತತ್–ದ್ವಾರದಲಿ ಬಪ್ಪ,
ಮೂರು ಎರಡು ವಿಧ ಮುಕ್ತಿ ಯೋಗ್ಯರ ತಾರತಮ್ಯವನು ಅರಿತು ಅವರ,
ಕಂಸ–ಅರಿ ಸಂಸಾರ ಅಬ್ಧಿ ದಾಟಿಸಿ ಮುಕ್ತರನ ಮಾಳ್ಪ ॥ ೨೧ ॥

ಬೆಳಗಿದ ಹೂಜಿಯು ನೋಳ್ಪರಿಗೆ ಥಳ–ಥಳಿಸುತಲಿ ಕಂಗೊಳಿಸುವ ಅಂದದಿ,
ತೊಳೆದು ದೇಹವ ನಾಮ ಮುದ್ರೆಗಳ ಇಂದ ಅಲಂಕರಿಸಿ, ಒಲಿಸಿ,
ನಿತ್ಯ ಕುತರ್ಕ ಯುಕ್ತಿಗಳ, ಅಲವಬೋಧರ ಶಾಸ್ತ್ರ ಮರ್ಮವ ತಿಳಿಯದಿಹ ನರ,
ಬರಿದೆ ಇದರೊಳು ಶಂಕಿಸಿದರೆ ಏನು? ॥ ೨೨ ॥

ಉದಧಿಯೊಳು ಊರ್ಮಿಗಳು ತೋರ್ಪಂದದಲಿ, ಹಂಸ–ಉದ್ಗೀಥ–ಹರಿ–
ಹಯವದನ–ಕೃಷ್ಣ ಆದಿ ಅಮಿತ ಅವತಾರಗಳು ನಿತ್ಯದಲಿ,
ಪದುಮ–ನಾಭನೊಳು ಇರುತಿಹವು ಸರ್ವದ, ಸಮಸ್ತ ಪ್ರಾಣಿಗಳ ಚಿತ್–ಹೃದಯುಗತ ರೂಪಗಳು,
ಅವ್ಯವಧಾನದಲಿ ಬಿಡದೆ ॥ ೨೩ ॥

ಶರಧಿಯೊಳು ಮಕರ ಆದಿ ಜೀವರು ಇರಳು–ಹಗಲು ಏಕ ಪ್ರಕಾರದಿ,
ಚರಿಸುತ ಅನುಮೋದಿಸುತ ಇಪ್ಪಂದದಿ,
ಜಗ–ತ್ರಯುವು ಇರುತಿಹದು ಜಗ–ದೀಶನ ಉದರದಿ,
ಕರೆಸುವದು ಪ್ರತಿಬಿಂಬ ನಾಮದಿ, ಧರಿಸಿಹದು ಹರಿ ನಾಮ ರೂಪಂಗಳನು ಅನವರತ ॥ ೨೪ ॥

ಜನನಿ ಸೌಷ್ಮ ಪದಾರ್ಥಗಳು ಭೋಜನವ ಮಾಡಲು, ಗರ್ಭಗತ ಶಿಶು ದಿನ–ದಿನದಿ
ಅಭಿವೃದ್ಧಿ ಯೈದುವ ತೆರದಿ,
ಜೀವರಿಗೆ ಪದುಮ–ನಾಭನು ಸರ್ವ ರಸ ಉಂಡು ಉಣಿಸಿ ಸಂ–ರಕ್ಷಿಸುವ,
ಜಾಹ್ನವಿ ಜನಕ, ಜನ್ಮ ಆದಿ ಅಖಿಳ ದೋಷ ವಿದೂರ, ಗಂಭೀರ ॥ ೨೫ ॥

ಆಶೆಗೆ ಒಳಗೆ ಆದವನು, ಜನರಿಗೆ ದಾಸನು ಎನಿಸುವ,
ಆಶೆಯನು ನಿಜ ದಾಸಗೆ ಐದಿಹ ಪುಂಸಗೆ ಎಲ್ಲರು ದಾಸರು ಎನಿಸುವರು ॥
ಶ್ರೀಶನ ಅಂಘ್ರಿ ಸರೋಜ ಯುಗಳ ನಿರಾಶೆ ಯಿಂದಲಿ ಭಜಿಸೆ ಒಲಿದು,
ರಮಾ ಸಹಿತ ತನ್ನನೆ ಕೊಡುವ ಕರುಣಾ ಸಮುದ್ರ ಹರಿ ॥ ೨೬ ॥

ದ್ಯು–ನದಿ ಆದ್–ಅಂತವನು ಕಾಣದೆ ಮನುಜನು ಏಕತ್ರದಲಿ ತಾ ಮಜ್ಜನವ ಗೈಯೆ,
ಸಮಸ್ತ ದೋಷದಿ ಮುಕ್ತನಹ ತೆರದಿ,
ಅನಘನ ಅಮಲ ಅನಂತ–ಅನಂತ ಸು–ಗುಣಗಳೊಳಗೆ ಒಂದೇ ಗುಣ
ಉಪಾಸನೆಯ ಗೈವ, ಮಹಾತ್ಮ, ಧನ್ಯ, ಕೃತಾರ್ಥನು ಎನಿಸುವನು ॥ ೨೭ ॥

ವಾಸುದೇವನು ಕರೆಸುವನು ಕಾರ್ಪಾಸ ನಾಮದಿ, ಸಂಕರುಷಣನು ವಾಸ ವಾಗಿಹ ತೂಲದೊಳು,
ತಂತುಗನು ಪ್ರದ್ಯುಮ್ನ,
ವಾಸ ರೂಪ ಅನಿರುದ್ಧ ದೇವನು,
ಭೂಷಣನು ತಾನಾಗಿ ತೋರ್ಪ ಪರೇಶ ನಾರಾಯಣನು, ಸರ್ವದ ಮಾನ್ಯ ಮಾನದನು ॥ ೨೮ ॥

ಲಲನೆ ಯಿಂದ ಒಡಗೂಡಿ, ಚೈಲಗಳೊಳಗೆ ಓತ–ಪ್ರೋತ ರೂಪದಿ
ನೆಲೆಸಿಹನು ಚತುರ ಆತ್ಮಕ ಜಗನ್ನಾಥ ವಿಠಲನು,
ಛಳಿ ಬಿಸಿಲು ಮಳೆ ಗಾಳಿಯಿಂದ ಅರ–ಘಳಿಗೆ ಬಿಡದಲೆ ಕಾವನು ಎಂದರಿದು,
ಇಳೆಯೊಳು ಅರ್ಚಿಸುತಿರು ಸದಾ ಸರ್ವ ಅಂತರ–ಆತ್ಮಕನ ॥ ೨೯ ॥

॥ ಇತಿ ಶ್ರೀ ಶ್ವಾಸ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಸ್ವಗತಸ್ವಾತಂತ್ರ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಸ್ವಗತ ಸ್ವಾತಂತ್ರಿಯ ಗುಣವ ಹರಿ ತೆಗೆದು ಬ್ರಹ್ಮ ಆದ್ಯರಿಗೆ ಕೊಟ್ಟದು,
ಭೃಗು ಮುನಿಪ ಪೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ ॥

ಪರಮ ವಿಷ್ಣು ಸ್ವತಂತ್ರ, ಮಾಯಾ ತರುಣಿ ವಕ್ಷಸ್ಥಳ ನಿವಾಸಿ,
ಸರಸಿ–ಜ ಉದ್ಭವ–ಪ್ರಾಣರು ಈರ್ವರು ಸಚಿವರು ಎನಿಸುವರು,
ಸರುವ ಕರ್ಮಗಳಲ್ಲಿ ತತ್–ಪ್ರಿಯರು, ಉರಗ ಭೂಷಣ ಅಹಂ–ಕೃತಿ–ತ್ರಯ,
ಕರೆಸುವ ಅಮರ–ಇಂದ್ರ ಅರ್ಕ ಮುಖರು ಇಂದ್ರಿಯ–ಪ–ರು ಎನಿಸುವರು ॥ ೧ ॥

ಈ ದಿವೌಕಸರ ಅಂತೆ ಕಲಿ ಮೊದಲಾದ ದೈತ್ಯರು, ಸರ್ವ ದೇಹದಿ ತೋದಕರು ತಾವಾಗಿ
ವ್ಯಾಪಾರಗಳ ಮಾಡುವರು,
ವೇಧನ ಅಂದದಿ ಕಲಿಯು, ಅಹಂಕಾರ ಅಧಿಪ ಅಧಮ ಮಧುಕು–ಕೈಟಭ,
ಕ್ರೋಧಿ–ಶಂಬರ ಮುಖರು ಮನಸಿಗೆ ಸ್ವಾಮಿ ಯೆನಿಸುವರು ॥ ೨ ॥

ದೇವತೆಗಳ ಉಪಾದಿ ನಿತ್ಯದಿ ಏವಮ್ ಆದೀ ನಾಮ ದಿಂದಲಿ,
ಯಾವದ್–ಇಂದ್ರಿಯಗಳಲಿ ವ್ಯಾಪಾರಗಳ ಮಾಡುವರು,
ಸೇವಕರ ಸೇವ ಅನುಗುಣ ಫಲವು ಈವ ನೃಪನ ಅಂದದಲಿ,
ತನ್ನ ಸ್ವಭಾವ ಸ್ವಾತಂತ್ರಿಯ ವಿಭಾಗವ ಮಾಡಿ ಕೊಟ್ಟ ಹರಿ ॥ ೩ ॥

ಅಗಣಿತ ಸ್ವಾತಂತ್ರಿಯವ ನಾಲ್–ಬಗೆ ವಿಭಾಗವ ಮಾಡಿ,
ಒಂದನುತೆಗೆದು ದಶವಿಧ ಗೈಸಿ ಪಾದರೆ ಪಂಚ ಪ್ರಾಣನಲಿ,
ಮೊಗ ಚತುಷ್ಟಯ ನೊಳು ಸಪಾದ ಐದು ಗುಣವು ಇರಸಿದ,
ಮತ್ತೆ ದಶ–ವಿಧ ಯುಗಳ ಗುಣವನು ಮಾಡಿ ಎರಡು ಸದಾ ಶಿವನೊಳು ಇಟ್ಟ ॥ ೪ ॥

ಪಾಕ–ಶಾಸನ ಕಾಮರೊಳು ಸ–ಅರ್ಧ ಐಕ ವಿಟ್ಟ, ದಶ ಇಂದ್ರಿಯರ
ಸು–ದಿವೌಕಸ ಆದ್ಯರೊಳು ಒಂದು, ಯಾವಜ್–ಜೀವರೊಳಗೆ ಒಂದು,
ನಾಲ್ಕು–ವರೆ ಕಲಿ–ಆದಿ ದೈತ್ಯ ಅನೀಕಕೆ ಇತ್ತನು,
ಎರಡು, ತ್ರಿ–ವಿಧ ವಿವೇಕ ಗೈಸಿ, ಇಂದಿರಗೆ ಒಂದು, ಎರಡು ಆತ್ಮ ತನ್ನೊಳಗೆ ॥ ೫ ॥

ಈ ವಿಧದಿ ಸ್ವಾತಂತ್ರಿಯತ್ವವ ದೇವ–ಮಾನವ–ದಾನವರೊಳು
ರಮಾ–ವಿನೋದಿ ವಿಭಾಗ ಮಾಡಿಟ್ಟು ಅಲ್ಲೆ ರಮಿಸುವನು,
ಮೂವರೊಳಗೆ ಇದ್ದು, ಅವರ ಕರ್ಮವ ತಾ ವಿಕಾರವ–ಗೈಸದಲೆ,
ಕಲ್ಪ ಅವಸಾನಕೆ ಕೊಡುವನು ಅನಾಯಾಸ ಅವರ ಗತಿಯ ॥ ೬ ॥

ಆಲಯಗಳೊಳು ಇಪ್ಪ ದೀಪ ಜ್ವಾಲೆ, ವರ್ತಿಗಳ ಅನುಸರಿಸಿ ಜನರ ಆಲಿಗೆ ಒಪ್ಪುವ ತೆರದಿ,
ಹರಿ ತಾ ತೋರ್ಪ ಸರ್ವತ್ರ,
ಕಾಲ–ಕಾಲದಿ ಶ್ರೀ–ಧರಾ–ದುರ್ಗಾ ಲಲನೆಯರ ಕೂಡಿ ಸುಖಮಯ ಲೀಲೆ ಗೈಯಲು,
ತ್ರಿಗುಣ ಕಾರ್ಯಗಳು ಇಹವು ಜೀವರಿಗೆ ॥ ೭ ॥

ಇಂದ್ರಿಯಗಳಿಂ ಮಾಳ್ಪ ಕರ್ಮ ದ್ವಂದ್ವಗಳ ತನಗರ್ಪಿಸಲು,
ಗೋವಿಂದ ಪುಣ್ಯವ ಕೊಂಡು, ಪಾಪವ ಭಸ್ಮವನೆ ಮಾಳ್ಪ,
ಇಂದಿರ–ಈಶನು ಭಕ್ತ ಜನರನು ನಿಂದಿಸುವರೊಳಗೆ ಇಪ್ಪ,
ಪುಣ್ಯವ ತಂದು ತನ್ನವಗೆ ಈವ, ಪಾಪಗಳ ಅವರಿಗೆ ಉಣಿಸುವನು ॥ ೮ ॥

ಹೊತ್ತು ಹೊತ್ತಿಗೆ ಪಾಪ–ಕರ್ಮ ಪ್ರವರ್ತಕರ ನಿಂದಿಸದೆ,
ತನಗಿಂದ ಉತ್ತಮರ ಗುಣ–ಕರ್ಮಗಳ ಕೊಂಡಾಡದಲೆ ಇಪ್ಪ ಮರ್ತ್ಯರಿಗೆ,
ಗೋ–ಬ್ರಾಹ್ಮಣ–ಸ್ತ್ರೀ ಹತ್ಯ ಮೊದಲಾದ ಅಖಿಳ ದೋಷಗಳ ಇತ್ತಪನು,
ಸಂದೇಹ ಪಡಸಲ್ಲ ಅಖಿಳ ಶಾಸ್ತ್ರ–ಮತ ॥ ೯ ॥

ತನ್ನ ಸ್ವಾತಂತ್ರ್ಯ ಗುಣಗಳ ಹಿರಣ್ಯ ಗರ್ಭ ಆದ್ಯರಿಗೆ,
ಕಲಿ–ಮುಖ ದಾನವರ ಸಂತತಿಗೆ, ಅವರ ಅಧಿಕಾರವ ಅನುಸರಿಸಿ
ಪುಣ್ಯ–ಪಾಪಗಳ ಈವ, ಬಹು ಕಾರುಣ್ಯ ಸಾಗರನು
ಅಲ್ಪ ಶಕ್ತಿಗಳ ಉಣ್ಣಲರಿಯದೆ ಇರಲು, ಉಣ ಕಲಿಸಿದನು ಜೀವರಿಗೆ ॥ ೧೦ ॥

ಸತ್ಯ ವಿಕ್ರಮ ಪುಣ್ಯ–ಪಾಪ ಸಮಸ್ತರಿಗೆ ಕೊಡಲೋಸುಗದಿ,
ನಾಲ್ವತ್ತು ಭಾಗವ ಮಾಡಿ, ಲೇಶ ಅಂಶವನು ಜನಕೆ ಈವ,
ಅತ್ಯ ಅಲುಪ ಪರಮಾಣು ಜೀವಗೆ ಸಾಮರ್ಥ್ಯವನು ತಾ ಕೊಟ್ಟು,
ಸ್ಥೂಲ ಪದಾರ್ಥಗಳ ಉಂಡು ಉಣಿಪ ಸರ್ವದ ಸರ್ವ ಜೀವರಿಗೆ ॥ ೧೧ ॥

ತಿಮಿರ ತರಣಿಗಳು ಏಕ ದೇಶದಿ ಸಮನಿಸಿ ಇಪ್ಪವೆ ಎಂದಿಗೆ ಆದರು?,
ಭ್ರಮಣ–ಛಳಿ–ಬಿಸಲು–ಅಂಜಿಕೆಗಳ್ ಉಂಟೇನೊ ಪರ್ವತಕೆ?,
ಅಮಿತ ಜೀವರೊಳು ಇದ್ದು ಲಕ್ಷ್ಮೀ ರಮಣ ವ್ಯಾಪಾರಗಳ ಮಾಡುವ,
ಕಮಲ–ಪತ್ರ ಸರೋವರಗಳೊಳಗೆ ಇಪ್ಪ ತೆರದಂತೆ ॥ ೧೨ ॥

ಅಂಬು–ಜ ಉದ್ಭವ ಮುಖ್ಯ ಸುರ, ಕಲಿ ಶಂಬರ ಆದಿ ಸಮಸ್ತ ದೈತ್ಯ ಕದಂಬಕೆ,
ಅನುದಿನ ಪುಣ್ಯ–ಪಾಪ ವಿಭಾಗವನೆ ಮಾಡಿ,
ಅಂಬುಧಿಯ ಜಲವನು ಮಹದ್–ಘಟ ದಿಂಬನಿತು ತುಂಬುವ ತೆರದಿ,
ಪ್ರತಿ–ಬಿಂಬರೊಳು ತಾನು ಇದ್ದು, ಯೋಗ್ಯತೆ ಯಂತೆ ಫಲವ ಈವ ॥ ೧೩ ॥

ಇನಿತು ವಿಷ್ಣು ರಹಸ್ಯದೊಳು ಭೃಗು ಮುನಿಪ ಇಂದ್ರದ್ಯುಮ್ನಗೆ ಅರುಪಿದದನು,
ಬುಧರು ಕೇಳುವುದು ನಿತ್ಯದಿ ಮತ್ಸರವ ಬಿಟ್ಟು,
ಅನುಚಿತ ಉಕ್ತಿಗಳು ಇದ್ದರೆಯು ಸರಿ, ಗಣನೆ ಮಾಡದಿರು ಎಂದು
ವಿದ್ವದ್–ಜನಕೆ ವಿಜ್ಞಾಪನೆಯ ಮಾಡುವೆ, ವಿನಯ ಪೂರ್ವಕದಿ ॥ ೧೪ ॥

ವೀತ ಭಯ, ವಿಶ್ವ ಈಶ, ವಿಧಿ ಪಿತ, ಮಾತುಳ ಅಂತಕ, ಮಧ್ವ ವಲ್ಲಭ,
ಭೂತ ಭಾವನ, ಅನಂತ ಭಾಸ್ಕರ ತೇಜ, ಮಹರಾಜ,
ಗೌತಮನ ಮಡದಿಯನು ಕಾಯ್ದು, ಆನಾಥ ರಕ್ಷಕ,
ಗುರು–ತಮ ಜಗನ್ನಾಥ ವಿಠಲ ತನ್ನ ನಂಬಿದ ಭಕುತರನು ಪೊರೆವ ॥ ೧೫ ॥

॥ ಇತಿ ಶ್ರೀ ಸ್ವಗತಸ್ವಾತಂತ್ರ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ದತ್ತಸ್ವಾತಂತ್ರ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಕಾರುಣಿಕ ಹರಿ ತನ್ನೊಳು ಇಪ್ಪ ಅಪಾರ ಸ್ವಾತಂತ್ರಿಯ ಗುಣವ ನಾನೂರು ತೆಗೆದು,
"ಸಪಾದ ಆರು–ಒಂದು ಅಧಿಕ ಅರವತ್ತು" ನಾರಿಗಿತ್ತ,
"ದ್ವಿ–ಷೋಡಶ ಅಧಿಕ ನೂರು ಪಾದ ತ್ರಯವ" ತನ್ನ ಶರೀರದೊಳಗೆ,
ಈಪರಿ ವಿಭಾಗವ ಮಾಡಿ ತ್ರಿ–ಪದ ಆಹ್ವ ॥ ೧ ॥

ಸತ್ಯ ಲೋಕ ಅಧಿಪನ ಒಳಗೆ "ಐವತ್ತು ಎರಡು", ಪವಮಾನನೊಳು "ನಾಲ್ವತ್ತು ಮೇಲೆ ಎಂಟು"–
ಅಧಿಕ, ಶಿವನೊಳಗೆ ಇಟ್ಟನು ಇಪ್ಪತ್ತು, ಚಿತ್ತ–ಜ ಇಂದ್ರರೊಳು "ಐದು ಅಧಿಕ ದಶ",
ತತ್ವ ಮಾನಿಗಳು ಎನಿಪ ಸುರರೊಳು ಹತ್ತು,
"ಈರು ಐದು" ಅಖಿಳ ಜೀವರೊಳು ಇಟ್ಟ ನಿರವದ್ಯ ॥ ೨ ॥

ಕಲಿ ಮೊದಲುಗೊಂಡ ಅಖಿಳ ದಾನವರೊಳಗೆ "ನಾಲ್ವತ್ತು ಐದು",
ಈ ಪರಿ ತಿಳಿದು, ಉಪಾಸನೆ ಮಾಡು ಮರೆಯದೆ, ಪರಮ ಭಕುತಿಯಲಿ,
ಇಳೆಯೊಳಗೆ ಸಂಚರಿಸು, ಲಕ್ಷ್ಮೀ ನಿಲಯನ ಆಳಾನೆಂದು,
ಸರ್ವ ಸ್ಥಳಗಳಲಿ ಸಂತೈಸುತ ಇಪ್ಪನು ಗೆಳೆಯನಂದದಲಿ ॥ ೩ ॥

ಅವನಿ–ಪ ಸ್ವಾಮಿತ್ವ ಧರ್ಮವ ಸ್ವವಶ ಮಾತ್ಯರಿಗೆ ಇತ್ತು,
ತಾ ಮತ್ತವರ ಮುಖದಲಿ ರಾಜ ಕಾರ್ಯವ ಮಾಡಿಸುವ ತೆರದಿ,
ಕವಿಭಿರೀಡಿತ ತನ್ನ ಕಳೆಗಳ ದಿವಿ–ಜ ದಾನವ ಮಾನವರೊಳು ಇಟ್ಟು,
ಅವಿರತ ಗುಣ ತ್ರಯ–ಜ ಕರ್ಮವ ಮಾಡಿ ಮಾಡಿಸುವ ॥ ೪ ॥

ಪುಣ್ಯ–ಪಾಪಗಳು ಈ ತೆರದಿ ಕಾರುಣ್ಯ ಸಾಗರ ದೇವ–ದಾನವ–ಮಾನವರೊಳು ಇಟ್ಟು,
ಅವರ ಫಲ ವ್ಯತ್ಯಾಸವನೆ ಮಾಡಿ,
ಬನ್ನ ಬಡಿಸುವ ಭಕ್ತಿ ಹೀನರ ಸನ್ನುತ ಸು–ಕರ್ಮ ಫಲತೆಗೆದು,
ಪ್ರಪನ್ನರಿಗೆ ಕೊಟ್ಟು ಅವರ ಸುಖ ಬಡಿಸುವನು ಸು–ಭುಜ ಆಹ್ವ ॥ ೫ ॥

ಮಾಣಿಕವ ಕೊಂಡು ಅಂಗಡಿಯೊಳು, ಅಜಿವಾನ ಕೊಟ್ಟು, ಆ ಪುರುಷನ ಸಮಾಧಾನ ಮಾಡುವ ತೆರದಿ,
ದೈತ್ಯರು ನಿತ್ಯದಲಿ ಮಾಳ್ಪ, ॥
ದಾನ ಯಜ್ಞ ಆದಿಗಳ ಫಲ, ಪವಮಾನ ಪಿತನು ಅಪಹರಿಸಿ,
ಅ–ಸಮೀಚೀನ ಸುಖಗಳ ಕೊಟ್ಟು ಅಸುರರ ಮತ್ತರನು ಮಾಳ್ಪ ॥ ೬ ॥

ಏಣ–ಲಾಂಛನನ ಅಮಲ ಕಿರಣ, ಕ್ರಮೇಣ ವೃದ್ಧಿಯನು ಐದಿ,
ಲೋಗರ ಕಾಣ–ಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ,
ವೈನತೇಯ–ಅಂಸಗನ ಮೂರ್ತಿ ಧ್ಯಾನವು ಉಳ್ಳ ಮಹಾತ್ಮರಿಗೆ,
ಸುಜ್ಞಾನ ಭಕ್ತ್ಯ ಆದಿಗಳು ವರ್ಧಿಸಿ ಸುಖವೆ ಕೊಡುತಿಹರು ॥ ೭ ॥

ಜನಪನ ಅರಿಕೆಯ ಚೋರ, ಪೊಳಲೊಳು ಧನವ ಕದ್ದು ಒಯ್ದು ಈಯಲು,
ಅವನ ಅವಗುಣಗಳು ಎಣಿಸದೆ ಪೊರೆವ, ಕೊಡದಿರೆ ಶಿಕ್ಷಿಸುವ ತೆರದಿ,
ಅನುಚಿತ–ಉಚಿತ ಕರ್ಮ, ಕೃಷ್ಣ ಅರ್ಪಣವು ಎನಲು,
ಕೈಕೊಂಡು ತನ್ನ ಅರಮನೆಯೊಳು ಇಟ್ಟು ಆನಂದ ಬಡಿಸುವ, ಮಾಧವ ಅನತರ ॥ ೮ ॥

ಅನ್ನದ ಅನ್ನಾದ ಅನ್ನ ನಾಮಕ, ಮುನ್ನ ಪೇಳ್ದ ಪ್ರಕಾರ,
ಜೀವರೊಳು ಅನ್ನ ರೂಪ ಪ್ರವೇಷ ಗೈದು, ಅವರ–ಅವರ ವ್ಯಾಪಾರ,
ಬನ್ನಬಡದಲೆ ಮಾಡಿ ಮಾಡಿಸಿ, ಧನ್ಯರು ಇವರು ಅಹುದು ಎಂದೆನಿಸಿ,
ತ್ರೈ–ಗುಣ್ಯ ವರ್ಜಿತ, ತತ್–ತದ್–ಆಹ್ವಯನು ಆಗಿ ಕರೆಸುವನು ॥ ೯ ॥

ಸಲಿಲ–ಬಿಂದು ಪಯ ಅಬ್ಧಿಯೊಳು ಬೀಳಲು, ವಿಕಾರವನು ಐದ ಬಲ್ಲದೆ, ।
ಜಲವು ತದ್–ರೂಪವನೆ ಐದುವದು ಎಲ್ಲ ಕಾಲದಲಿ,
ಕಲಿಮಲ–ಅಪಹನ ಅರ್ಚಿಸುವ ಸತ್–ಕುಲಜರ ಕು–ಕರ್ಮಗಳು,
ತಾ ನಿಷ್–ಕಲುಷ ಕರ್ಮಗಳು ಆಗಿ, ಪುರುಷ–ಅರ್ಥಗಳ ಕೊಡುತಿಹರು ॥ ೧೦ ॥

ಮೊಗದೊಳಗೆ ಮೊಗವು–ಇಟ್ಟು ಮುದ್ದಿಸಿ ಮಗುವಿನಂ ಬಿಗಿದು ಅಪ್ಪಿ ರಂಬಿಸಿ,
ನೇಹದಿ ತೆಗೆದು, ತನ್ನಯ ಸ್ತನಗಳು ಉಣಿಸುವ ಜನನಿಯಂದದಲಿ,
ಅಗಣಿತ–ಆತ್ಮನು ತನ್ನ ಪಾದ–ಅಬ್ಜಗಳ ಧೇನಿಪ ಭಕ್ತ ಜನರಿಗೆ,
ಪ್ರಫಟಕನು ತಾನಾಗಿ ಸೌಖ್ಯಗಳು ಈವ ಸರ್ವತ್ರ ॥ ೧೧ ॥

ತೋಟಿಗನು ಭೂಮಿಯೊಳು ಬೀಜವ ನಾಟಬೇಕು ಎಂದೆನುತ,
ಹಿತದಲಿ ಮೋಟೆಯಿಂ ನೀರು–ಎತ್ತಿ ಸಸಿಗಳ ಸಂತಯಿಸುವಂತೆ,
ಪಾಟು ಬಡದಲೆ, ಜಗದಿ ಜೀವರ, ಘೋಟಕ–ಆಸ್ಯನು ಸೃಜಿಸಿ,
ಯೋಗ್ಯತೆ ದಾಟಗೊಡದಲೆ ಸಲಹುತ ಇಪ್ಪನು ಸರ್ವ ಕಾಲದಲಿ ॥ ೧೨ ॥

ಭೂಮಿಯೊಳು ಜಲವಿರೆ ತೃಷ-ಆರ್ತನು ತಾ ಮರೆದು,
ಮೊಗವೆತ್ತಿ ಎಣ್ ದೆಸೆ-ವ್ಯೋಮ ಮಂಡಲದೊಳಗೆ ಕಾಣದೆ ಮಿಡುಕುವಂದದಲಿ,
ಶ್ರೀ-ಮನೋರಮ ಸರ್ವರ ಅಂತರ್ಯಾಮಿಯು ಆಗಿರೆ ತಿಳಿಯಲು ಅರಿಯದೆ,
ಭ್ರಾಮಕರು ಭಜಿಸುವರು ಭಕುತಿಯಲಿ ಅನ್ಯ ದೇವತೆಯ ॥ ೧೩ ॥

ಮುಖ್ಯ ಫಲ ವೈಕುಂಠ, ಮುಖ್ಯ-ಅಮುಖ್ಯ ಫಲ ಮಹದ್-ಆದಿ ಲೋಕಾ,
ಅಮುಖ್ಯ ಫಲ ವೈಷಯಿಕವು ಎಂದು ಅರಿದು, ಅತಿ ಭಕುತಿ ಯಿಂದ
ರಕ್ಕಸ ಅರಿಯ ಭಜಿಸುತಲಿ ನಿರ್-ದು:ಖನು ಆಗು,
ನಿರಂತರದಿ ಮೊರೆ ಪೊಕ್ಕವರ ಬಿಡ, ಭೃತ್ಯವತ್ಸಲ, ಭಾರತಿ-ಈಶ ಪಿತ ॥ ೧೪ ॥

ವ್ಯಾಧಿಯಿಂ ಪೀಡಿತ ಶಿಶುವಿಗೆ ಗುಡ-ಉದಕವ ನೆರೆದು ಅದಕೆ ಔಷಧ ತೇದು,
ಕುಡಿಸುವ ತಾಯಿಯ-ಉಪಾದಿಯಲಿ,
ಸರ್ವಜ್ಞ ಬಾದರಾಯಣ, ಭಕ್ತ ಜನಕೆ ಪ್ರಸಾದ ರೂಪಕನು ಆಗಿ,
ಭಾಗವತ-ಆದಿಯಲಿ ಪೇಳಿದನು ಧರ್ಮ ಆದಿಗಳೆ ಫಲವು ಎಂದು ॥ ೧೫ ॥

ದೂರದಲ್ಲಿ ಇಹ ಪರ್ವತ ಘನ ಆಕಾರ ತೋರ್ಪುದು ನೋಳ್ಪ ಜನರಿಗೆ,
ಸಾರ ಗೈಯಲು ಸರ್ವ ವ್ಯಾಘ್ರಗಳಿಂದ ಭಯವ ಇಹುದು,
ಘೋರ-ತರ ಸಂಸಾರ ಸೌಖ್ಯ ಅಸಾರ ತರವೆಂದು ಅರಿತು,
ನಿತ್ಯ ರಮಾ-ರಮಣನ ಆರಾಧಿಸುವರು, ಅದರಿಂದ ಬಲ್ಲವರು ॥ ೧೬ ॥

ಕೆಸರ ಘಟಗಳ ಮಾಡಿ, ಬೇಸಿಗೆ ಬಿಸಿಲೊಳಗೆ ಇಟ್ಟು ಒಣಗಿಸಿದರು ಅದು,
ಘನ ರಸವು ತುಂಬಲು ಬಹುದೆ?, ಸರ್ವ ಸ್ವತಂತ್ರ ನಾನು ಎಂಬ
ಪಶು-ಪ ನರನು ಏನು-ಏನು ಮಾಳ್ಪ, ಅನಶನ-ದಾನ-ಸ್ನಾನ ಕರ್ಮಗಳು,
ಒಸರಿ ಪೋಪಪು, ಬರಿದೆ ದೇಹ ಆಯಾಸವನೆ ಕೊಟ್ಟು ॥ ೧೭ ॥

ಎರಡು ದೀಕ್ಷೆಗಳು ಇಹವು, ಬಾಹ್ಯ-ಅಂತರವು ಎನಿಪ ನಾಮದಲಿ,
ಬುಧರಿಂದ ಅರಿತು ದೀಕ್ಷಿತನು ಆಗು ದೀರ್ಘ ದ್ವೇಷಗಳ ಬಿಟ್ಟು,
ಹರಿಯೆ ಸರ್ವ-ಉತ್ತಮ, ಕ್ಷರ-ಅಕ್ಷರ ಪುರುಷ ಪೂಜಿತ ಪಾದ,
ಜನ್ಮ ಆದಿ ಅರವಿ ದೂರ, ಸುಖ ಆತ್ಮ, ಸರ್ವಗನು ಎಂದು ಸ್ಮರಿಸುತಿರು ॥ ೧೮ ॥

ಹೇಯವಸ್ತುಗಳು ಇಲ್ಲವು, ಉಪ-ಆದೇಯ ವಸ್ತುಗಳು ಇಲ್ಲ,
ನ್ಯಾಯ-ಅನ್ಯಾಯ ಧರ್ಮಗಳು ಇಲ್ಲ, ದ್ವೇಷ-ಅಸೂಯೆ ಮೊದಲೆ ಇಲ್ಲ,
ತಾಯಿ ತಂದೆಗಳು ಇಲ್ಲ, ಕಮಲದಳ-ಆಯತ ಅಕ್ಷಗೆ ಯೆನಲು,
ಈಸುವ ಕಾಯಿ ಯಂದದಿ ಮುಳಗ ಗೊಡದೆ, ಭವ ಅಬ್ಧಿ ದಾಟಿಸುವ ॥ ೧೯ ॥

ಮಂದನು ಆದರು ಸರಿಯೆ, ಗೋಪೀ-ಚಂದನ ಶ್ರೀ-ಮುದ್ರೆಗಳ ನಲುವಿಂದ ಧರಿಸುತ,
ಶ್ರೀತುಲಸಿ ಪದುಮ-ಆಕ್ಷಿ ಸರಗಳನು ಕಂಧರದ ಮಧ್ಯದಲಿ ಧರಿಸಿ,
ಮುಕುಂದ ಶ್ರೀ-ಭೂ-ರಮಣ, ತ್ರಿ-ಜಗದ್-ವಂದ್ಯ,
ಸರ್ವ ಸ್ವಾಮಿ, ಮಮ ಕುಲ ದೈವವು, ಎನೆ ಪೊರೆವ ॥ ೨೦ ॥

ಪ್ರಾಯ ಧನ ಮದದಿಂದ ಜನರಿಗೆ ನಾಯಕ ಪ್ರಭುವು ಎಂಬಿ,
ಪೂರ್ವದಿ ತಾಯಿ ಪೊಟ್ಟೆಯೊಳು ಇರಲು, ಪ್ರಭುವು ಎಂದು ಏಕೆ ಕರೆಯರು ಅಲ್ಲೈ?,
ಕಾಯ ನಿನ್ನನು ಬಿಟ್ಟು ಪೋಗಲು, ರಾಯ ನೀನು ಎಂಬುವ ಪ್ರಭುತ್ವ,
ಪಲಾಯನ-ವನು ಐದಿತು, ಸಮೀಪದಲಿ ಇದ್ದರೆ ಅದು ತೋರು ॥ ೨೧ ॥

ವಾಸುದೇವ ಏಕ ಪ್ರಕಾರದಿ ಈಶನು ಎನಿಸುವ,
ಬ್ರಹ್ಮ ರುದ್ರ ಶಚಿ-ಈಶ ಮೊದಲಾದ ಅಮರರು ಎಲ್ಲರು ದಾಸರು ಎನಿಸುವರು,
ಈ ಸುಮಾರ್ಗವ ಬಿಟ್ಟು, ಸೋಹಮ್ ಉಪಾಸನೆಯ ಗೈವ ನರ,
ದೇಹ-ಜ ದೈಶಿಕ ಕ್ಲೇಶಗಳು ಬರಲು, ಅವನು ಏಕೆ ಬಿಡಿಸಿಕೊಳ ॥ ೨೨ ॥

ಆ ಪರ-ಬ್ರಹ್ಮನಲಿ ತ್ರಿ-ಜಗದ್-ವ್ಯಾಪಕ-ಅತ್ವ, ನಿಯಾಮಕ-ಅತ್ವ,
ಸ್ಥಾಪಕ-ಅತ್ವ, ವಶ-ಅತ್ವ, ಈಶ-ಅತ್ವ್ ಆದಿ ಗುಣಗಳಿಗೆ ಲೋಪವು ಇಲ್ಲ
ಏಕ ಪ್ರಕಾರ ಸ್ವರೂಪವು ಎನಿಪವು ಸರ್ವ ಕಾಲದಿ, ಪೋಪುವು-ಅಲ್ಲವು,
ಜೀವರಿಗೆ ದಾಸ-ಅತ್ವದ-ಉಪಾದಿ ॥ ೨೩ ॥

ನಿತ್ಯ, ನೂತನ, ನಿರ್-ವಿಕಾರ, ಸು-ಹೃತ್ತಮ, ಪ್ರಣ ವಸ್ಥ,
ವರ್ಣ ಉತ್ಪತ್ತಿ ಕಾರಣ, ವಾಕ್-ಮನ: ಮಯ, ಸಾಮ ಗಾನ ರತ,
ದತ್ತ-ಕಪಿಲ-ಹಯಾಸ್ಯ ರೂಪದಿ, ಪೃಥ್-ಪೃತಗ್ ಜೀವರೊಳಗೆ ಇದ್ದು ಪ್ರವರ್ತಿಸುವನು,
ಅವರ-ಅವರ ಯೋಗ್ಯತೆ ಕರ್ಮವ ಅನುಸರಿಸಿ ॥ ೨೪ ॥

ಶ್ರುತಿಗಳು ಆತನ ಮಾತು, ವಿಮಲ ಸ್ಮೃತಿಗಳು ಆತನ ಶಿಕ್ಷೆ,
ಜೀವ ಪ್ರತತಿ ಪ್ರಕೃತಿಗಳು ಎರಡು ಪ್ರತಿಮೆಗಳು ಎನಿಸಿ ಕೊಳುತ ಇಹವು,
ಇತರ ಕರ್ಮಗಳು ಎಲ್ಲ ಲಕ್ಷ್ಮೀ ಪತಿಗೆ ಪೂಜೆಗಳು ಎಂದು ಸ್ಮರಿಸುತ,
ಚತುರ ವಿಧ ಪುರುಷ ಅರ್ಥಗಳ ಬೇಡದಿರು ಸ್ವಪ್ನದಲಿ ॥ ೨೫ ॥

ಭೂತಳ ಅಧಿಪನು, ಆಜ್ಞಾ ಧಾರಕ ದೂತರಿಗೆ,
ಸೇವ ಆನುಸಾರದಿ ವೇತನವ ಕೊಟ್ಟು, ಅವರ ಸಂತೋಷಿಸುವ ತೆರದಂತೆ,
ಮಾತರಿಶ್ವ-ಪ್ರಿಯನು, ಪರಮ ಪ್ರೀತಿ ಪೂರ್ವಕ,
ಸದ್-ಗುಣಂಗಳ ಗಾಧಕರ ಸಂತೋಷ ಬಡಿಸುವ, ಇಹ-ಪರಂಗಳಲಿ ॥ ೨೬ ॥

ದೀಪ ದಿವದಲಿ ಕಂಡರೆ ಆದಡೆ, ಲೋಪ ಗೈಸುವರು ಆ ಕ್ಷಣ,
ಹರಿ ಸಮೀಪದಲ್ಲಿ ಇರೆ ನಂದ ನಾಮ ಸುನಂದವು ಎನಿಸುವವು,
ಔಪಚಾರಿಕವು ಅಲ್ಲ, ಸು-ಜನರ ಪಾಪ ಕರ್ಮವು ಪುಣ್ಯವು ಎನಿಪವು,
ಪಾಪಿಗಳ ಸತ್-ಪುಣ್ಯ ಕರ್ಮವು ಪಾಪವು ಎನಿಸುವವು ॥ ೨೭ ॥

ಧನವ ಸಂಪಾದಿಸುವ, ಪ್ರದ್ರಾವಣಿಕರ ಅಂದದಿ,
ಕೋವಿದರ ಮನೆ ಮನೆ-ಗಳಲಿ ಸಂಚರಿಸು, ಶಾಸ್ತ್ರ ಶ್ರವಣ ಗೋಸುಗದಿ,
ಮನನಗೈದು ಉಪದೇಶಿಸುತ, ದುರ್-ಜನರ ಕೂಡಿ ಆಡದಿರು ಸ್ವಪ್ನದಿ,
ಪ್ರಣತ ಕಾಮದ ಕೊಡುವ ಸೌಖ್ಯಗಳ ಇಹ-ಪರಂಗಳಲಿ ॥ ೨೮ ॥

ಕಾರಕ ಕ್ರಿಯ ದ್ರವ್ಯ ವಿಭ್ರಮ ಮೂರು ವಿಧ ಜೀವರಿಗೆ,
ಬಹು ಸಂಸಾರಕೆ ಇವು ಕಾರಣವು ಎನಿಸುವವು, ಎಲ್ಲ ಕಾಲದಲಿ ದೂರ ವೋಡಿಸಿ,
ಭ್ರಾಮಕ-ತ್ರಯ ಮಾರಿಗೆ ಒಳಗೆ ಆಗದಲೆ,
ಸರ್ವ ಆಧಾರಕನ ಚಿಂತಿಸುತಲಿ ಇರು, ಸರ್ವತ್ರ ಮರೆಯದಲೆ ॥ ೨೯ ॥

ಕರಣ ಕರ್ಮವ ಮಾಡಿದರೆ, ವಿಸ್ಮರಣೆ ಕಾಲದಿ ಮಾತುಗಳಿಗೆ
ಉತ್ತರವ ಕೊಡದಲೆ ಸುಮ್ಮನೆ ಇಪ್ಪನು,
ಜಾಗರ ಅವಸ್ಥೆ ಕರುಣಿಸಲು ವ್ಯಾಪಾರ ಮಾಡುವ, ।
ಬರಲು ನಾಲ್ಕು ಅವಸ್ಥೆಗಳು ಪರಿಹರಿಸಿ ಕೊಳನು ಏತಕೆ? ಸ್ವತಂತ್ರನು ತಾನೆ ಯೆಂಬುವನು ॥ ೩೦ ॥

ಯುಕ್ತಿ ಮಾತುಗಳು ಅಲ್ಲ, ಶ್ರುತಿ ಸ್ಮೃತಿ ಉಕ್ತ ಮಾತುಗಳು ಇವು,
ವಿಚಾರಿಸೆ ಮುಕ್ತಿಗಿವು ಸೋಪಾನವು ಎನಿಪವು ಪ್ರತಿ-ಪ್ರತೀ ಪದವು,
ಭಕ್ತಿ ಪೂರ್ವಕ ಪಠಿಸುವವರಿಗೆ, ವ್ಯಕ್ತಿ ಕೊಡುವ ಸ್ವರೂಪ ಸುಖ,
ಪ್ರವಿವಿಕ್ತರನ ಮಾಡುವನು ಭವ-ಭಯದಿಂದ ಬಹು ರೂಪ ॥ ೩೧ ॥

ಶ್ರೀನಿವಾಸನ ಸುಗುಣ ಮಣಿಗಳ, ಪ್ರಾಣಮ್ ಅತ ವಯುನ-ಆಖ್ಯ ಸೂತ್ರದಿ ಪೋಣಿಸಿದ ಮಾಲಿಕೆಯ,
ವಾಕ್-ಮಯುಂಗೆ ಸಮರ್ಪಿಸಿದ,
ಜ್ಞಾನಿಗಳ ದೃಕ್-ವಿಷಯವು ಅಹುದ, ಅಜ್ಞಾನಿಗಳಿಗೆ ಅಸಹ್ಯ ತೋರ್ಪುದು,
ಮಾಣಿಕವ ಮರ್ಕಟನ ಕೈಯಲಿ ಕೊಟ್ಟ ತೆರದಂತೆ ॥ ೩೨ ॥

ಶ್ರೀ-ವಿಧಿ-ಈರ-ವಿಪ-ಅಹಿಪ-ಈಶ-ಶಚೀ ವರ-ಆತ್ಮಭವ-ಅರ್ಕ-ಶಶಿ-
ದಿಗ್ ದೇವ-ಋಷಿ-ಗಂಧರ್ವ-ಕಿನ್ನರ-ಸಿದ್ಧ-ಸಾಧ್ಯ ಗಣ ಸೇವಿತ ಪದ ಅಂಬುಜ,
ತ್ವತ್-ಪಾದ ಅವಲಂಬಿಗಳು ಆದ ಭಕ್ತರ ಕಾವ,
ಕರುಣಾ ಸಾಂದ್ರ, ಲಕ್ಷ್ಮೀ ಹೃತ್-ಕುಮುದ ಚಂದ್ರ ॥ ೩೩ ॥

ಆದರಿಶ ಅಗತಾಕ್ಷ ಭಾಷಾ ಭೇದದಿಂದಲಿ ಕರೆಯಲು ಅದನು,
ನಿಷೇಧ ಗೈದು ಅವಲೋಕಿಸದೆ ಬಿಡುವರೆ ವಿವೇಕಿಗಳು,
ಮಾಧವನ ಗುಣ ಪೇಳ್ವ ಪ್ರಾಕೃತವು ಆದರೆಯು ಸರಿ,
ಕೇಳಿ ಪರಮ ಆಹ್ಲಾದ ಬಡದೆ ಇಪ್ಪರೆ?, ನಿರಂತರ ಬಲ್ಲ ಕೋವಿದರು ॥ ೩೪ ॥

ಭಾಸ್ಕರನ ಮಂಡಲವ ಕಂಡು ನಮಸ್ಕರಿಸಿ ಮೋದಿಸದೆ,
ದ್ವೇಷದಿ ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ?,
ಸಂಸ್ಕೃತವು ಇದಲ್ಲ ಎಂದು, ಕುಹಕ ತಿರಸ್ಕರಿಸಲು ಏನಹುದು?
ಭಕ್ತಿ ಪುರಸ್ಕರದಿ ಕೇಳ್ವರಿಗೆ ವೊಲಿವನು, ಪುಷ್ಕರ ಆಕ್ಷ ಸದಾ ॥ ೩೫ ॥

ಪತಿತನ ಕಪಾಲದೊಳು ಭಾಗೀರಥಿಯ ಜಲವಿರೆ ಪೇಯವು ಎನಿಪುದೆ?,
ಇತರ ಕವಿ ನಿರ್ಮಿತ ಕುಕಾವ್ಯ ಅಶ್ರಾವ್ಯ ಬುಧರಿಂದ,
ಕೃತಿ ಪತಿ ಕಥ ಅನ್ವಿತವು ಎನಿಪ ಪ್ರಾಕೃತವೆ ತಾ ಸಂಸ್ಕೃತವು ಎನಿಸಿ,
ಸದ್-ಗತಿಯನು ಈವುದು, ಭಕ್ತಿ ಪೂರ್ವಕ ಕೇಳಿ ಪೇಳ್ವರಿಗೆ ॥ ೩೬ ॥

ವೇದ-ಶಾಸ್ತ್ರ-ಸಯುಕ್ತಿ ಗ್ರಂಥಗಳು ಓದಿ ಕೇಳ್ದವನು ಅಲ್ಲ,
ಸಂತತ ಸಾಧುಗಳ ಸಹವಾಸ ಸಲ್ಲಾಪಗಳು ಮೊದಲಿಲ್ಲ,
ಮೋದ ತೀರ್ಥ ಆರ್ಯರ ಮತಾನುಗರು ಆದವರ ಕರುಣದಲಿ ಪೇಳ್ದೆ,
ರಮಾಧವ ಜಗನ್ನಾಥ ವಿಠಲ ತಿಳಿಸಿದದರೊಳಗೆ ॥ ೩೭ ॥

॥ ಶ್ರೀ ದತ್ತಸ್ವಾತಂತ್ರ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಬಿಂಬಾಪರೋಕ್ಷ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಮುಕ್ತ ಬಿಂಬನು ತುರಿಯ, ಜೀವನ್–ಮುಕ್ತ ಬಿಂಬನು ವಿಶ್ವ,
ಶ್ರುತಿ ಸಂಸಕ್ತ ಬಿಂಬನು ತೈಜಸನು, ಅಸೃಜ್ಯರಿಗೆ ಪ್ರಾಜ್ಞ,
ಶಕ್ತ ನಾದರು ಸರಿಯೆ ಸರ್ವ ಉದ್ರಕ್ತ ಮಹಿಮನು,
ದು:ಖ ಸುಖಗಳ ವಕ್ತೃ ಮಾಡುತಲಿ ಇಪ್ಪ ಕಲ್ಪ ಅಂತದಲಿ ಬಪ್ಪರಿಗೆ ॥ ೧ ॥

ಅನ್ನ ನಾಮಕ ಪ್ರಕೃತಿಯೊಳಗೆ ಅಚ್ಛಿನ್ನನು ಆಗಿಹ ಪ್ರಾಜ್ಞನಾಮದಿ,
ಸೊನ್ನ ಒಡಲ ಮೊದಲಾದ ಅವರೊಳು ಅನ್ನಾದ ತೈಜಸನು,
ಅನ್ನದ ಅಂಬುದ ನಾಭ ವಿಶ್ವನು, ಭಿನ್ನ ನಾಮ ಕ್ರಿಯೆಗಳಿಂದಲಿ,
ತನ್ನೊಳಗೆ ತಾ ರಮಿಪ, ಪೂರ್ಣ ಆನಂದ, ಜ್ಞಾನ ಮಯ ॥ ೨ ॥

ಬೂದಿಯೊಳಗೆ ಅಡಗಿಪ್ಪ ಅನಳನ ಉಪಾದಿ, ಚೇತನ ಪ್ರಕೃತಿಯೊಳು ಅನ್ನಾದ ಅನ್ನ ಆಹ್ವಯದಿ
ಕರೆಸುವ ಬ್ರಹ್ಮ–ಶಿವ ರೂಪಿ,
ಓದನ ಪ್ರದ ವಿಷ್ಣು, ಪರಮ ಆಹ್ಲಾದವ ಈವುತ,
ತೃಪ್ತಿ ಬಡಿಸುವ ಅಗಾಧ ಮಹಿಮನ ಚಿತ್ರ ಕರ್ಮವನು ಆವ ಬಣ್ಣಿಸುವ ॥ ೩ ॥

ನಾದ ಭೋಜನ ಶಬ್ದದೊಳು, ಬಿಂಬು ಓದನ ಉದಕದೊಳಗೆ,
ಘೋಷ ಅನುವಾದದೊಳು, ಶಾಂತ ಆಖ್ಯ ಜಠರ ಅಗ್ನಿಯೊಳಗೆ ಇರುತಿಪ್ಪ,
ವೈದಿಕ ಸುಶಬ್ದದೊಳು ಪುತ್ರ ಸಹೋದರ ಅನುಗರೊಳು ಅತಿ–ಶಾಂತನ ಪಾದ ಕಮಲ
ಅನವರತ ಚಿಂತಿಸು ಈ ಪರಿಯಲಿಂದ ॥ ೪ ॥

ವೇದ ಮಾನಿ ರಮಾ ಅನುಪಾಸ್ಯ, ಗುಣ ಉದಧಿ, ಗುಣ ತ್ರಯ ವಿವರ್ಜಿತ,
ಸ್ವ–ಉದರ ಸ್ಥಿತ, ನಿಖಿಳ ಬ್ರಹ್ಮ–ಅಂಡ ಆದಿ ವಿಲಕ್ಷಣನು,
ಸಾಧು ಸಮ್ಮತ ವೆನಿಸುತಿಹ, ನಿಷುಸೀದ ಗಣಪತಿ ಯೆಂಬ ಶ್ರುತಿ ಪ್ರತಿಪಾದಿಸುವದು
ಅನವರತ ಅವನ ಗುಣ ಪ್ರಾಂತ ಗಾಣದಲೆ ॥ ೫ ॥

ಕರೆಸುವನು ಮಾಯಾ ರಮಣ ತಾ ಪುರುಷ ರೂಪದಿ ತ್ರಿ–ಸ್ಥಳಗಳೊಳು,
ಪರಮ ಸತ್–ಪುರುಷ–ಅರ್ಥ–ದ ಮಹತ್–ತತ್ವದ–ಒಳಗೆ ಇದ್ದು,
ಸರಸಿ–ಜ ಭವ–ಅಆಂಡ ಸ್ಥಿತ ಸ್ತ್ರೀ ಪುರುಷ ತನ್–ಮಾತ್ರಗಳ
ಏಕ–ಉತ್ತರ ದಶ ಇಂದ್ರಿಯಗಳ ಮಹಾ–ಭೂತಗಳ ನಿರ್ಮಿಸಿದ ॥ ೬ ॥

ಈ ಶರೀರ–ಗ ಪುರುಷ, ತ್ರಿ ಗುಣದಿ ಸ್ತ್ರೀ ಸಹಿತ ತಾನು ಇದ್ದು,
ಜೀವರಿಗೆ ಆಶೆ–ಲೋಭ–ಅಜ್ಞಾನ–ಮದ–ಮತ್ಸರ–ಕುಮೋಹ–ಕ್ಷುಧ–
ಹಾಸ–ಹರ್ಷ–ಸುಷುಪ್ತಿ–ಸ್ವಪ್ನ–ಪಿಪಾಸ–ಜಾಗ್ರತಿ–ಜನ್ಮ–ಸ್ಥಿತಿ–ಮೃತಿ–
ದೋಷ–ಪುಣ್ಯ–ಜಯ–ಅಪಜಯ ದ್ವಂದ್ವಗಳ ಕಲ್ಪಿಸಿದ ॥ ೭ ॥

ತ್ರಿ–ವಿಧ ಗುಣ ಮಯ ದೇಹ, ಜೀವಕೆ ಕವಚದಂದದಿ ತೊಡಿಸಿ,
ಕರ್ಮ ಪ್ರವಹದೊಳು ಸಂಚಾರ ಮಾಡಿಸುತ ಇಪ್ಪ ಜೀವರನಾ,
ಕವಿಸಿ ಮಾಯಾ ರಮಣ ಮೋಹವ, ಭವಕೆ ಕಾರಣ ನಾಗುವನು,
ಸಂ–ಶ್ರವಣ ಮನನವ ಮಾಳ್ಪರಿಗೆ ಮೋಚಕನು ಎನಿಸುತಿಪ್ಪ ॥ ೮ ॥

ಸಾಶನ ಆಹ್ವಯ, ಸ್ತ್ರೀ ಪುರುಷರೊಳು ವಾಸ ವಾಗಿಹನು ಎಂದು ಅರಿದು,
ವಿಶ್ವಾಸ ಪೂರ್ವಕ ಭಜಿಸಿ ತೋಷಿಸು ಸ್ವಾವರ–ಉತ್ತಮರ,
ಕ್ಲೇಶ ನಾಶನ ಅಚಲಗಳೊಳು ಪ್ರಕಾಶಿಸುತಲಿಹ,
ಅನಶನ ರೂಪ ಉಪಾಸನವ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ ॥ ೯ ॥

ಪ್ರಕಾರ ಅಂತರ ಚಿಂತಿಸುವದು ಈ ಪ್ರಕೃತಿಯೊಳು ವಿಶ್ವಾದಿ ರೂಪವ,
ಪ್ರಕಟ ಮಾಳ್ಪನು ಯಥಾ ಮತಿಯೊಳು ಗುರುಕೃಪಾಬಲದಿ,
ಮುಕುರ ನಿರ್ಮಿತ ಸದನದೊಳು ಪೊಗೆ, ಸ್ವಕಿಯ ರೂಪವ ಕಾಂಬ ತೆರದಂತೆ,
ಅಕುಟಿಲ ಆತ್ಮ ಚರ–ಅಚರದಿ ಸರ್ವತ್ರ ತೋರುವನು ॥ ೧೦ ॥

ಪರಿಚ್ಛೇದ ತ್ರಯ ಪ್ರಕೃತಿಯೊಳಗೆ ಇರುತಿಹನು ವಿಶ್ವಾದಿ ರೂಪಕ,
ಧರಿಸಿ ಆತ್ಮಾದಿ ತ್ರಿ ರೂಪವ ಈಷಣ ತ್ರಯದಿ,
ಸುರುಚಿ ಜ್ಞಾನ ಆತ್ಮ ಸ್ವ–ರೂಪದಿ ತುರಿಯ ನಾಮಕ ವಾಸುದೇವನ ಸ್ಮರಿಸು,
ಮುಕ್ತಿ ಸುಖ ಪ್ರದಾಯಕನು ಈತನು ಅಹುದು ಎಂದು ॥ ೧೧ ॥

ಕಮಲ ಸಂಭವ ಜನಕ, ಜಡ ಜಂಗಮರ ಒಳಗೆ ನೆಲೆಸಿ ಇದ್ದು,
ಕ್ರಮ ವ್ಯುತ್–ಕ್ರಮದಿ ಕರ್ಮವ ಮಾಡಿ ಮಾಡಿಸುತ ಇಪ್ಪ ಬೇಸರದೆ,
ಕ್ಷಮ ಕ್ಷಾಮ ಕ್ಷಮೀಹನ ಆಹ್ವಯ, ಸುಮನಸ ಅಸುರರೊಳಗೆ
ಅಹಂ–ಮಮ–ನ ಮಮ ಎಂದು ಈ ಉಪಾಸನೆ ಈವ ಪ್ರಾಂತದಲಿ ॥ ೧೨ ॥

ಈ ಸಮಸ್ತ ಜಗತ್ತು ಈಶ ಆವಾಸ್ಯವು ಎನಿಪುದು,
ಕಾರ್ಯ ರೂಪವು ನಾಶವಾದರು, ನಿತ್ಯವೇ ಸರಿ ಕಾರಣ ಪ್ರಕೃತಿ,
ಶ್ರೀಶಗೆ ಜಡ ಪ್ರತಿಮೆ ಯೆನಿಪುದು, ಮಾಸದು ಒಮ್ಮಿಗು ಸನ್ನಿಧಾನವು,
ವಾಸವಾಗಿಹ ನಿತ್ಯ ಶಾಲಗ್ರಾಮದ ಉಪಾದಿ ॥ ೧೩ ॥

ಏಕಮೇವ ಅದ್ವಿತೀಯ ರೂಪ, ಆನೇಕ ಜೀವರೊಳು ಇದ್ದು,
ತಾ ಪ್ರತ್ಯೇಕ ಕರ್ಮವ ಮಾಡಿ ಮೋಹಿಸುತ ಇಪ್ಪ ತಿಳಿಸದಲೆ,
ಮೂಕ ಬಧಿರ ಅಂಧ ಆದಿ ನಾಮಕ ಈ ಕಳೇವರದೊಳಗೆ ಕರೆಸುವ,
ಮಾ–ಕಳತ್ರನ ಲೌಕಿಕ ಮಹಾ ಮಹಿಮೆಗೆ ಏನೆಂಬೆ ॥ ೧೪ ॥

ಲೋಕ ಬಂಧು:, ಲೋಕ ನಾಥ, ವಿಶೋಕ, ಭಕ್ತರ ಶೋಕ ನಾಶನ,
ಶ್ರೀ ಕರಾರ್ಚಿತ, ಸೋಕದಂದದಲಿ ಇಪ್ಪ ಸರ್ವರೊಳು,
ಸಾಕುವನು ಸಜ್ಜನರ, ಪರಮ ಕೃಪಾಕರ ಈಶ, ಪಿನಾಕಿ ಸನ್ನುತ,
ಸ್ವೀಕರಿಸುವ ಆನತರು ಕೊಟ್ಟ ಸಮಸ್ತ ಕರ್ಮಗಳ ॥ ೧೫ ॥

ಆಹಿತ ಪ್ರತಿಮೆಗಳು ಎನಿಸುವವು, ದೇಹ–ಗೇಹ–ಅಪತ್ಯ–ಸತಿ–ಧನ–
ಲೋಹ–ಕಾಷ್ಠ–ಶಿಲಾ–ಮೃದ್ ಆತ್ಮಕವು ಆದ ದ್ರವ್ಯಗಳು,
ನೇಹ್ಯದಲಿ ಪರಮಾತ್ಮ ಎನಗೆ ಇತ್ತೀಹನು ಎಂದು ಅರಿದು ಅನುದಿನದಿ,
ಸಮ್–ಮೋಹಕೆ ಒಳಗೆ ಆಗದಲೆ ಪೂಜಿಸು ಸರ್ವ ನಾಮಕನ ॥ ೧೬ ॥

ಶ್ರೀ ತರುಣಿ ವಲ್ಲಭಗೆ ಜೀವರು ಚೇತನ ಪ್ರತಿಮೆಗಳು,
ಓತ–ಪ್ರೋತನು ಆಗಿದ್ದು ಎಲ್ಲರೊಳು ವ್ಯಾಪಾರ ಮಾಡುತಿಹ,
ಹೋತ ಸರ್ವ ಇಂದ್ರಿಯಗಳೊಳು ಸಂಪ್ರೀತಿಯಿಂದ ಉಂಡುಣಿಸಿ ವಿಷಯ,
ನಿರ್ವಾತ ದೇಶ–ಗ ದೀಪದಂದದಲಿ ಇಪ್ಪ ನಿರ್ಭಯದಿ ॥ ೧೭ ॥

ಭೂತ ಸೋಕಿದ ಮಾನವನು ಬಹು ಮಾತನು ಆಡುವ ತೆರದಿ,
ಮಹಾ ಭೂತ ವಿಷ್ಣ್ವಾ ಅವೇಶದಿಂದಲಿ ವರ್ತಿಪುದು ಜಗವು,
ಕೈತವ ಉಕ್ತಿಗಳು ಅಲ್ಲ, ಶೇಷ ಫಣ ಆತ ಪತ್ರಗೆ,
ಜೀವ ಪಂಚಕ ವ್ರಾತವು ಎಂದಿಗು, ಭಿನ್ನ ಪಾದ ಆಹ್ವಯದಿ ಕರೆಸುವದು ॥ ೧೮ ॥

ದಿವಿಯೊಳು ಇಪ್ಪುವು ಮೂರು ಪಾದಗಳು, ಅವನಿಯೊಳಗೆ ಇಹುದು ಒಂದು,
ಈ ವಿಧ ಕವಿಭಿರೀಡಿತ ಕರೆಸುವ ಚತುಷ್–ಪಾತು ತಾನು ಎಂದು,
ಇವನ ಪಾದ ಚತುಷ್ಟಯಗಳ ಅನುಭವಕೆ ತಂದು ನಿರಂತರದಿ,
ಉದ್ಧವನ ಸಖ ಸರ್ವ ಅಂತರ ಆತ್ಮಕನು ಎಂದು ಸ್ಮರಿಸುತಿರು ॥ ೧೯ ॥

ವಂಶ ಬಾಗಲು ಬೆಳೆಯೆ, ಕಂಡು ನರ ಅಂಶದಲಿ ಶೋಭಿಪುದು,
ಬಾಗದ ವಂಶ ಪಾಶದಿ ಕಟ್ಟಿ, ಏರುಪ ಡೊಂಬ ಮಸ್ತಕಕೆ,
ಕಂಸ ಮರ್ದನ ದಾಸರಿಗೆ ನಿಸ್-ಸಂಶಯದಿ ಎರಗದಲೆ,
ನಾ ವಿದ್ವಾಂಸನು ಎಂದು ಅಹಂಕರಿಸೆ, ಭವಗುಣದಿ ಬಂಧಿಸುವ ॥ ೨೦ ॥

ಜ್ಯೋತಿ ರೂಪಗೆ ಪ್ರತಿಮೆಗಳು ಸಾಂಕೇತಿಕ ಆರೋಪಿತ,
ಸು-ಪೌರುಷ ಧಾತು ಸಪ್ತಕ ಧೈರ್ಯ-ಶೌರ್ಯ-ಔದಾರ್ಯ-ಚಾತುರ್ಯ,
ಮಾತು-ಮಾನ-ಮಹತ್ವ-ಸಹನ-ಸುನೀತಿ-ನಿರ್ಮಲ ದೇಶ ಬ್ರಾಹ್ಮಣ,
ಭೂತ ಪಂಚಕ ಬುದ್ಧಿ ಮೊದಲಾದ ಇಂದ್ರಿಯ ಸ್ಥಾನ ॥ ೨೧ ॥

ಜೀವ ರಾಶಿಯೊಳು ಅ-ಮೃತ ಶಾಶ್ವತ, ಸ್ಥಾವರಗಳೊಳು ಸ್ಥಾಣು ನಾಮಕ,
ಆವಕಾಲದಲಿ ಇಪ್ಪ ಅಜಿತ ಅನಂತನು ಎಂದೆನಿಸಿ,
ಗೋವಿದಾಂ-ಪತಿ, ಗಾಯನ ಪ್ರಿಯ, ಸಾವಯವ, ಸಾಹಸ್ರ ನಾಮ,
ಪರಾವರ ಈಶ, ಪವಿತ್ರ ಕರ್ಮ, ವಿಪಶ್ಚಿತ, ಸು-ಸಾಮ ॥ ೨೨ ॥

ಮಾಧವನ ಪೂಜ ಅರ್ಥವಾಗಿ ನಿಷೇಧ ಕರ್ಮವ ಮಾಡಿ,
ಧನ ಸಂಪಾದಿಸಲು ಸತ್-ಪುಣ್ಯ ಕರ್ಮಗಳು ಎನಿಸಿ ಕೊಳುತಿಹವು,
ಸ್ವ-ಉದರಂಭರಣ ಅರ್ಥ ನಿತ್ಯದಿ ಸಾಧು ಕರ್ಮವ ಮಾಡಿದರು ಸರಿ,
ಯೈದುವನು ದೇಹ ಅಂತರವ ಸಂದೇಹವು ಇನಿತಿಲ್ಲ ॥ ೨೩ ॥

ಅಪಗತ ಆಶ್ರಯ ಎಲ್ಲರೊಳಗೆ ಇದ್ದು, ಉಪಮನು ಎನಿಪ ಅನುಪಮ ರೂಪನು,
ಶಫರ ಕೇತನ ಜನಕ ಮೋಹಿಪ ಮೋಹಕನ ತೆರದಿ,
ತಪನ ಕೋಟಿ ಸಮ ಪ್ರಭಾ, ಸಿತ ವಪುವು ಎನಿಪ, ಕೃಷ್ಣ ಆದಿ ರೂಪಕ,
ವಿಪಗಳಂತೆ ಉಂಡು ಉಣಿಪ ಸರ್ವತ್ರದಲಿ ನೆಲೆಸಿದ್ದು ॥ ೨೪ ॥

ಅಡವಿಯೊಳು ಬಿತ್ತದಲೆ ಬೆಳೆದಿಹ ಗಿಡದ ಮೂಲಿಕೆ,
ಸಕಲ ಜೀವರ ಒಡಲೊಳು ಇಪ್ಪ ಆಮಯವ ಪರಿಹರ ಗೈಸುವಂದದಲಿ,
ಜಡ-ಜ ಸಂಭವ ಜನಕ, ತ್ರಿ-ಜಗದ್-ವಡೆಯ ಸಂತೈಸು ಎನಲು,
ಅವರು ಇದ್ದೆಡೆಗೆ ಬಂದೊದಗುವನು, ಭಕ್ತರ ಭಿಡೆಯ ಮೀರದಲೆ ॥ ೨೫ ॥

ಶ್ರೀ-ನಿಕೇತನ ತನ್ನವರ ದೇಹ ಅನುಬಂಧಿಗಳಂತೆ ಅ-ವ್ಯವಧಾನದಲಿ ನೆಲೆಸಿ ಇಪ್ಪ,
ಸರ್ವ-ದ ಸಕಲ ಕಾಮದನು,
ಏನು ಕೊಟ್ಟರು ಭುಂಜಿಸುತ ಮದ್ದಾನೆ ಯೆಂದದಿ ಸಂಚರಿಸು,
ಮತ್ತೇನು ಬೇಡದೆ ಭಜಿಸುತಿರು ಅವನ ಅಂಘ್ರಿ ಕಮಲಗಳ ॥ ೨೬ ॥

ಬೇಡದಲೆ ಕೊಡುತ ಇಪ್ಪ ಸುರರಿಗೆ, ಬೇಡಿದರೆ ಕೊಡುತಿಹನು ನರರಿಗೆ,
ಬೇಡಿ ಬಳಲುವ ದೈತ್ಯರಿಗೆ ಕೊಡನು ಒಮ್ಮೆ ಪುರುಷಾರ್ಥ,
ಮೂಢರು ಅನುದಿನ ಧರ್ಮ ಕರ್ಮವ ಮಾಡಿದರು ಸರಿ,
ಅಹಿಕ ಫಲಗಳ ನೀಡಿ ಉನ್ಮತ್ತರನು ಮಾಡಿ ಮಹಾ ನಿರಯವೀವ ॥ ೨೭ ॥

ತರಣಿ ಸರ್ವತ್ರದಲಿ ಕಿರಣವ ಹರಹಿ, ತತ್-ತದ್-ವಸ್ತುಗಳನು ಸರಿಸಿ,
ಅದರ ಅದರಂತೆ ಛಾಯವ ಕಂಗೊಳಿಪ ತೆರದಿ,
ಅರಿ-ಧರ ಏಜ-ಅನೇಜ ಜಗದೊಳಗೆ ಇರುವ, ಛಾಯಾ ತಪವು ಎನಿಸಿ,
ಸಂಕರುಷಣ ಆಹ್ವಯ ಅವರ-ಅವರ ಯೋಗ್ಯತೆಗಳಂತೆ ಇಪ್ಪ ॥ ೨೮ ॥

ಈ ವಿಧದಿ ಸರ್ವತ್ರ ಲಕ್ಷ್ಮೀ-ಭೂ-ವನಿತೆಯರ ಕೂಡಿ,
ತನ್ನ ಕಳಾ ವಿಶೇಷಗಳ ಎಲ್ಲ ಕಡೆಯಲಿ ತುಂಬಿ ಸೇವ್ಯ ತಮ,
ಸೇವಕನು ತಾನು ಎನಿಸಿ, ಮಾಯಾದೇವಿ ರಮಣ
ಪ್ರವಿಷ್ಟ ರೂಪವ ಸೇವೆ ಮಾಳ್ಪ, ಶರಣ್ಯ, ಶಾಶ್ವತ ಕರುಣಿ, ಕಮಲ ಅಕ್ಷ ॥ ೨೯ ॥

ಪ್ರಣವ ಕಾರಣ ಕಾರ್ಯ ಪ್ರತಿಪಾದ್ಯನು, ಪರಾತ್ಪರ,
ಚೇತನ-ಅಚೇತನ ವಿಲಕ್ಷಣ, ಅನಂತ ಸತ್-ಕಲ್ಯಾಣ ಗುಣ ಪೂರ್ಣ,
ಅನುಪಮನು, ಉಪಾಸಿತ, ಗುಣ ಉದಧಿ, ಅನಘ, ಅಜಿತ, ಅನಂತ,
ನಿಷ್ಕಿಂಚನ ಜನಪ್ರಿಯ, ನಿರ್-ವಿಕಾರ, ನಿರಾಶ್ರಯ, ಅವ್ಯಕ್ತಾ ॥ ೩೦ ॥

ಗೋಪ ಭೀಯ ಭವ ಅಂಧಕಾರಕೆ ದೀಪ ವಟ್ಟಿಗೆ,
ಸಕಲ ಸುಖ ಸದನ ಉಪರಿ ಗ್ರಹವು ಎನಿಸುತ ಇಪ್ಪುದು ಹರಿಕಥ ಅಮೃತವು,
ಗೋಪತಿ ಜಗನ್ನಾಥ ವಿಠಲ ಸಮೀಪದಲಿ ನೆಲೆಸಿದ್ದು,
ಭಕ್ತರನು ಆಪವರ್ಗರ ಮಾಡುವನು ಮಹ ದು:ಖ ಭಯದಿಂದ ॥ ೩೧ ॥

॥ ಇತಿ ಶ್ರೀ ಬಿಂಬಾಪರೋಕ್ಷ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ಗುಣತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀ–ಧರಾ–ದುರ್ಗಾ ಮನೋರಮ, ವೇಧಮುಖ ಸುಮನಸ ಗಣ ಸಮಾರಾಧಿತ ಪದ ಅಂಭು–ಜ,
ಜಗದ ಅಂತರ್–ಬಹಿರ್ ವ್ಯಾಪ್ತ,
ಗೋ–ಧರ ಫಣಿಪ ವರ ಆತಪತ್ರ, ನಿಷೇಧ ಶೇಷ, ವಿಚಿತ್ರ ಕರ್ಮ,
ಸು–ಬೋಧ, ಸುಖಮಯ ಗಾತ್ರ, ಪರಮ ಪವಿತ್ರ, ಸು–ಚರಿತ್ರ ॥ ೧ ॥

ನಿತ್ಯ ನಿರ್ಮಲ, ನಿಗಮ ವೇದಯ, ಉತ್ಪತ್ತಿ ಸ್ಥಿತಿ ಲಯ ದೂರ ವರ್ಜಿತ,
ಸ್ತುತ್ಯ, ಪೂಜ್ಯ,ಪ್ರಸಿದ್ಧ, ಮುಕ್ತ–ಅಮುಕ್ತ ಗಣ ಸೇವ್ಯ,
ಸತ್ಯ ಕಾಮ ,ಶರಣ್ಯ, ಶಾಶ್ವತ, ಭೃತ್ಯ ವತ್ಸಲ, ಭಯ ನಿವಾರಣ,
ಅತ್ಯಧಿಕ ಸಂಪ್ರಿಯ–ತಮ, ಜಗನ್ನಾಥ ಮಾಂ ಪಾಹಿ ॥ ೨ ॥

ಪರಮ ಪುರುಷನ ರೂಪ ಗುಣವ ಅನುಸರಿಸಿ ಕಾಂಬಳು ಪ್ರವಹ–ದಂದದಿ,
ನಿರುಪಮಳು, ನಿರ್–ದುಷ್ಟ ಸುಖ ಸಂಪೂರ್ಣಳು ಎನಿಸುವಳು,
ಹರಿಗೆ ಧಾಮ–ತ್ರಯಳು ಎನಿಸಿ, ಆಭರಣ ವಸನ ಆಯುಧಗಳು ಆಗಿದ್ದು
ಅರಿಗಳನು ಸಂಹರಿಸುವಳು ಅಕ್ಷರಳು ಎನಿಸಿಕೊಂಡು ॥ ೩ ॥

ಈತಗಿಂತ ಅನಂತ ಗುಣದಲಿ ಶ್ರೀ–ತರುಣಿ ತಾ ಕಡಿಮೆಯೆನಿಪಳು,
ನಿತ್ಯ ಮುಕ್ತಳು, ನಿರ್–ವಿಕಾರಳು, ತ್ರಿ–ಗುಣ ವರ್ಜಿತಳು,
ಧೌತ ಪಾಪ, ವಿರಿಂಚಿ ಪವನರ ಮಾತೆ ಯೆನಿಪ ಮಹಾಲಕುಮಿ,
ವಿಖ್ಯಾತಳು ಆಗಿಹಳು ಎಲ್ಲ ಕಾಲದಿ ಶ್ರುತಿ ಪುರಾಣದೊಳು ॥ ೪ ॥

ಕಮಲ ಸಂಭವ ಪವನರು ಈರ್ವರು ಸಮರು, ಸಮ ವರ್ತಿಗಳು,
ರುದ್ರ ಆದಿ ಆಮರ ಗಣ ಸೇವಿತರು, ಅಪರ–ಬ್ರಹ್ಮ ನಾಮಕರು,
ಯಮಳರಿಗೆ ಮಹಲಕ್ಷ್ಮಿ ತಾನು ಉತ್ತಮಳು, ಕೋಟಿ ಸಜಾತಿ ಗುಣದಿಂದ,
ಅಮಿತ ಸು–ವಿಜಾತಿ ಅಧಮರು ಎನಿಪರು ಬ್ರಹ್ಮ–ವಾಯುಗಳು ॥ ೫ ॥

ಪತಿಗಳಿಂದ ಸರಸ್ವತೀ ಭಾರತಿಗಳು ಅಧಮರು, ನೂರು ಗುಣ ಪರಿಮಿತ ವಿಜಾತಿ ಅವರರು,
ಬಲ ಜ್ಞಾನ ಆದಿ ಗುಣದಿಂದ ಅತಿಶಯರು ವಾಗ್ದೇವಿ ಶ್ರೀ ಭಾರತಿಗೆ,
ಪದ ಪ್ರಯುಕ್ತ, ವಿಧಿ ಮಾರುತರ ವೋಲ್ ಚಿಂತಿಪುದು
ಸದ್-ಭಕ್ತಿಯಲಿ ಕೋವಿದರು ॥ ೬ ॥

ಖಗಪ ಫಣಿಪತಿ ಮೃಡರು ಸಮ, ವಾಣಿಗೆ ಶತ ಗುಣ ಅವರರು ಮೂವರು,
ಮಿಗಿಲೆನಿಸುವನು ಶೇಷ ಪದ ದಿಂದಲಿ ತ್ರಿಯಂಬಕಗೆ,
ನಗ ಧರನ ಷಣ್-ಮಹಿಷಿಯರು ಪನ್ನಗ ವಿಭೂಷಣಗೆ ಐದು,
ಮೇನಕಿ ಮಗಳು-ವಾರುಣಿ-ಸೌಪರಣಿ ಗಳಿಗೆ, ಅಧಿಕವು ಎರಡು ಗುಣ ॥ ೭ ॥

ಗರುಡ ಶೇಷ ಮಹೇಷರಿಗೆ, ಸೌಪರಣಿ ವಾರುಣಿ ಪಾರ್ವತಿ ಮೂರರು ದಶ ಅಧಮ,
ವಾರುಣಿಗೆ ಕಡಿಮೆ ಎನಿಸುವಳು ಗೌರೀ,
ಹರನ ಮಡದಿಗೆ ಹತ್ತು ಗುಣದಲಿ ಸುರಪ-ಕಾಮರು ಕಡಿಮೆ,
ಇಂದ್ರಗೆ ಕೊರತೆ ಯೆನಿಸುವ ಮನ್ಮಥನು ಪದ-ದಿಂದಲಿ ಆವಾಗ ॥ ೮ ॥

ಈರು-ಅಯಿದು ಗುಣ ಕಡಿಮೆ ಆಹಂಕಾರಿಕ ಪ್ರಾಣನು ಮನೋಜ ನಗ ಆರಿಗಳಿಗೆ,
ಅನಿರುದ್ಧ ರತಿ ಮನು ದಕ್ಷ ಗುರು ಶಚಿಯು ಆರು ಜನ ಸಮ,
ಪ್ರಾಣನ-ಇಂದಲಿ ಹೌರಗ ಎನಿಪರು ಹತ್ತು ಗುಣದಲಿ,
ಮಾರಜಾದ್ಯರಿಗೆ ಐದು ಗುಣದಿಂದ ಅಧಮ ಪ್ರವಹ ಆಖ್ಯ ॥ ೯ ॥

ಗುಣ ದ್ವಯದಿಂ ಕಡಿಮೆ ಪ್ರವಹಗೆ ಇನ-ಶಶಾಂಕ-ಯಮ-"ಸ್ವಯಂಭುವ ಮನು ಮಡದಿ ಶತರೂಪ"-
ನಾಲ್ವರು, ಪಾದ ಪಾದ ಅರ್ಧ ವನಧಿ ನೀಚ,
ಪಾದ ಅರ್ಧ ನಾರದ, ಮುನಿಗೆ ಭೃಗು-ಅಗ್ನಿ-ಪ್ರಸೂತಿಗಳು
ಎನಿಸುವರು ಪಾದ ಅರ್ಧ ಗುಣದಿಂದ ಅಧಮರು ಅಹುದೆಂದು ॥ ೧೦ ॥

ಹುತ ವಹಗೆ ದ್ವಿಗುಣ ಅಧಮರು ವಿಧಿ-ಸುತ ಮರೀಚಿ ಆದಿಗಳು,
ವೈವಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್-ಗುಣ ಅಧಮನು,
ವ್ರತಿವರ-ಜಗನ್-ಮಿತ್ರ ವರ-ನಿರಋತಿ ಪ್ರಾವಹಿ ತಾರರಿಗೆ
ಕಿಂಚಿತು ಗುಣ ಅಧಮ ಧನಪ ವಿಷ್ವಕ್ಸೇನರು ಎನಿಸುವರು ॥ ೧೧ ॥

ಧನಪ ವಿಷ್ವಕ್ಸೇನ ಗೌರೀ-ತನಯರಿಗೆ ಉಕ್ತ ಇತರರು ಸಮರು ಎನಿಸುವರು,
ಎಂಭತ್ತು ಅಯಿದು ಜನ ಶೇಷ-ಶತರು ಎಂದು,
ದಿನಪರು ಆರು, ಏಳು ಅಧಿಕ ನಾಲ್ವತ್ತು ಅನಿಲರು, ಏಳು ವಸು,
ರುದ್ರರು ಈರು ಐದು, ಅನಿತು ವಿಶ್ವೇ ದೇವ, ಋಭು, ಅಶ್ವಿನೀ, ಪಿತೃ, ಧರಣೀ ॥ ೧೨ ॥

ಇವರಿಗಿಂತಲಿ ಕೊರತೆ ಯೆನಿಪರು ಚ್ಯವನ-ಸನಕಾದಿಗಳು-
ಪಾವಕ-ಕವಿ-ಉಚಿತ್ಥ್ಯ-ಜಯಂತ-ಕಶ್ಯಪ-ಮನುಗಳು ಏಕದಶ-
ಧೃವ-ನಹುಷ-ಶಶಿಬಿಂದು-ಹೈಹಯ-ದೌಷ್ಯಂತಿ-"ವಿರೋಚನನ ನಿಜ ಕುವರ"-
ಬಲಿ ಮೊದಲಾದ ಸಪ್ತ ಇಂದ್ರರು-ಕಕುತ್ಸ್ಥ-ಗಯ ॥ ೧೩ ॥

ಪೃಥು-ಭರತ-ಮಾಂಧಾತ-ಪ್ರಿಯವ್ರತ-ಮರುತ-ಪ್ರಹ್ಲಾದ-ಸುಪರೀಕ್ಷಿತ-
ಹರಿಶ್ಚಂದ್ರ-ಅಂಬರೀಷ-ಉತ್ತಾನಪಾದ ಮುಖ,
ಶತ ಸು-ಪುಣ್ಯ ಶ್ಲೋಕರು, ಗದಾ ಭೃತಗೆ ಅಧಿಷ್ಠಾನರು,
ಸು-ಪ್ರಿಯ-ವ್ರತಗೆ ದ್ವಿಗುಣ ಅಧಮರು ಕರ್ಮಜರು ಎಂದು ಕರೆಸುವರು ॥ ೧೪ ॥

ನಳಿನಿ-ಸಂಜ್ಞಾ-ರೋಹಿಣೀ-ಶ್ಯಾಮಲ-ವಿರಾಟ್-ಪರ್ಜನ್ಯರು ಅಧಮರು,
"ಯಲರು ಮಿತ್ರನ ಮಡದಿ" ದ್ವಿ-ಗುಣ-ಅಧಮಳು ಬಾಂಬೊಳಗೆ,
ಜಲ ಮಯ ಬುಧ ಅಧಮನು ದ್ವಿ-ಗುಣದಿ, ಕೆಳಗೆ ಎನಿಸುವಳು ಉಷಾ,
ಶನೈಶ್ಚರ-ಇಳಿಗೆ ಈರು ಗುಣ ಅಧಮರು ಉಷಾ ದೇವಿ ದ್ಯಸಿಯಿಂದಾ ॥ ೧೫ ॥

ಎರಡು ಗುಣ ಕರ್ಮ ಅಧಿಪತಿ ಪುಷ್ಕರ ಕಡಿಮೆ,
ಆಜಾನು ದಿವಿಜರು ಚಿರ-ಪಿತೃಗಳಿಂದ ಉತ್ತಮರು, ಕಿಂಕರರು ಪುಷ್ಕರಗೆ,
ಸುರಪನ ಆಲಯ ಗಾಯಕ ಉತ್ತಮ ಎರಡು ಅಯಿದು ಗುಣದಿಂದ ಅಧಮ,
ತುಂಬುರಗೆ ಸಮ ನೂರುಕೋಟಿ-ಋಷಿಗಳು ನೂರುಜನರ ಉಳಿದು ॥ ೧೬ ॥

ಅವರ-ಅವರ ಪತ್ನಿಯರು ಅಪ್ಸರ ಯುವತಿಯರು ಸಮ,
ಉತ್ತಮರನ ಉಳಿದು ಅವರರು ಎನಿಪರು, ಮನು-ಜ ಗಂಧರ್ವರು ದ್ವಿ-ಷಡ್ ಗುಣದಿ,
ಕುವಲಯ ಅಧಿಪರು ಈರು, ಅಯಿದು ಗುಣ ಅವನಿಪ ಸ್ತ್ರೀಯರು,
ದಶ ಉತ್ತರ ನವತಿ ಗುಣದಿಂದ ಅಧಮರು ಎನಿಪರು ಮಾನುಷ-ಉತ್ತಮರು ॥ ೧೭ ॥

ಸತ್ವ-ಸತ್ವರು, ಸತ್ವ-ರಾಜಸ, ಸತ್ವ-ತಾಮಸ ಮೂವರು,
ರಜಸ್-ಸತ್ವ ಅಧಿಕಾರಿಗಳು ಭಗವದ್-ಭಕ್ತರು ಎನಿಸುವರು,
ನಿತ್ಯ ಬದ್ಧರು ರಜೋ-ರಜರು, ಉತ್ಪತ್ತಿ ಭೂ-ಸ್ವರ್ಗದೊಳು,
ನರಕದಿ-ಪೃಥ್ವಿಯೊಳು ಸಂಚರಿಸುತ ಇಪ್ಪರು ರಜಸ್-ತಾಮಸರು ॥ ೧೮ ॥

ತಮಸ್-ಸಾತ್ವಿಕರು ಎನಿಸಿಕೊಂಬರು ಅಮಿತನ ಆಖ್ಯಾತ ಅಸುರರ ಗಣ,
ತಮೋ-ರಾಜಸರು ಎನಿಸಿಕೊಂಬರು ದೈತ್ಯ ಸಮುದಾಯ,
ತಮಸು-ತಾಮಸ ಕಲಿ ಪುರಂಧ್ರಿಯು, ಅಮಿತ ದುರ್ಗುಣ-ಪೂರ್ಣ,
ಸರ್ವ ಅಧಮರೊಳು ಅಧಮ-ಅಧಮ ದುರಾತ್ಮನು ಕಲಿ ಯೆನಿಸಿಕೊಂಬ ॥ ೧೯ ॥

ಇವನ ಪೋಲುವ ಪಾಪಿ ಜೀವರು ಭುವನ ಮೂವರೊಳು ಇಲ್ಲ ನೋಡಲು,
ನವ ವಿಧ ದ್ವೇಷಗಳಿಗೆ ಆಕಾರನು ಎನಿಸಿ ಕೊಳುತ ಇಪ್ಪ,
ಬವರದೊಳು–ಬಂಗಾರದೊಳು–ನಟ ಯುವತಿ–ದ್ಯೂತಾ–ಪೇಯ–ಮೃಷದೊಳು,
ಕವಿಸಿ ಮೋಹದಿ ಕೆಡಿಸುವವನು ಯೆಂದರಿದು ತ್ಯಜಿಸುವದು ॥ ೨೦ ॥

ತ್ರಿವಿಧ ಜೀವ ಪ್ರತತಿಗಳ ಸಗ್ಗ ಅವ್ಹೊಳೆಯಾಣ್ಮ, ಆಲಯನು ನಿರ್ಮಿಸಿ,
ಯುವತಿಯರ ವಡಗೂಡಿ ಕ್ರೀಡಿಸುವನು ಕೃಪಾ–ಸಾಂದ್ರ,
ದಿವಿ–ಜ–ದಾನವ ತಾರತಮ್ಯದ ವಿವರ ತಿಳಿವ ಮಹಾತ್ಮರಿಗೆ,
ಬಾನ್ನವಿರ–ಸಖ ತಾನು ಒಲಿದು ಉದ್ಧರಿಸುವನು ದಯದಿಂದ ॥ ೨೧ ॥

ದೇವ ದೈತ್ಯರ ತಾರತಮ್ಯವು, ಪಾವಮಾನಿ ಮತ ಅನುಗರಿಗೆ ಇದು ಕೇವಲ ಆವಶ್ಯಕವು,
ತಿಳಿವುದು ಸರ್ವ ಕಾಲದಲಿ,
ದಾವ–ಶಿಖಿ ಪಾಪ–ಅಟವಿಗೆ, ನವ ನಾವೆ ಯೆನಿಪುದು ಭವ ಸಮುದ್ರಕೆ,
ಪಾವಟಿಗೆ ವೈಕುಂಠ ಲೋಕಕೆ ಇದು ಎಂದು ಕರೆಸುವದು ॥ ೨೨ ॥

ತಾರತಮ್ಯ ಜ್ಞಾನ ಮುಕ್ತಿ ದ್ವಾರವು ಎನಿಪುದು, ಭಕ್ತ ಜನರಿಗೆ ತೋರಿ ಪೇಳಿ
ಸುಖ ಅಬ್ಧಿಯೊಳು ಲೋಲ್ಯಾಡುವುದು ಬುಧರು,
ಕ್ರೂರ ಮಾನವರಿಗೆ ಇದು ಕರ್ಣ ಕಠೋರವು ಎನಿಪುದು,
ನಿತ್ಯದಲಿ ಅಧಿಕಾರಿಗಳಿಗೆ ಇದನ ಅರುಪುವುದು ದುಸ್ತರ್ಕಿಗಳ ಬಿಟ್ಟು ॥ ೨೩ ॥

ಹರಿ–ಸಿರಿ–ವಿರಿಂಚಿ–ಈರ–ಭಾರತಿ–ಗರುಡ–ಫಣಿ ಪತಿ–ಷಣ್ ಮಹಿಷಿಯರು–
ಗಿರಿಜ–ನಾಕ ಈಶ–ಸ್ಮರ–ಪ್ರಾಣ–ಅನಿರುದ್ಧ–ಶಚೀದೇವಿ–
ಗುರು–ರತೀ–ಮನು–ದಕ್ಷ–ಪ್ರವಹಾ ಮರುತ–ಮಾನವಿ–ಯಮ–ಶಶಿ–ದಿವಾಕರ–
ವರುಣ–ನಾರದ–ಸುರ ಆಸ್ಯ–ಪ್ರಸೂತಿ–ಭೃಗು ಮುನಿಪ ॥ ೨೪ ॥

ವ್ರತತಿ–ಜ ಆಸನ ಪುತ್ರರು ಎನಿಸುವ ವ್ರತಿವರ ಮರೀಚಿ ಅತ್ರಿ–
ವೈವಸ್ವತನು–ತಾರಾ–ಮಿತ್ರ–ನಿರಋತಿ–ಪ್ರವಹ ಮಾರುತನ ಸತಿ–
ಧನ ಈಶ–ಅಶ್ವಿನಿಗಳ ಈರ್–ಗಣಪತಿಯು–ವಿಷ್ವಕ್ಸೇನ–ಶೇಷನು ಶತರು–
ಮನುಗಳು–ಉಚಿಥ್ಯ ಚಾವನ ಮುನಿಗಳಿಗೆ ನಮಿಪೆ ॥ ೨೫ ॥

ಶತ ಸು–ಪುಣ್ಯ ಶ್ಲೋಕರು ಎನಿಸುವ ಕ್ಷಿತಿಪರಿಗೆ ನಮಿಸುವೆನು,
ಭಾಗೀರಥಿ–ವಿರಾಟ್–ಪರ್ಜನ್ಯ–ರೋಹಿಣಿ–ಶ್ಯಾಮಲಾ–ಸಂಜ್ಞಾ–ಹುತ ವಹನ ಮಹಿಳಾ–
ಬುಧ–ಉಷಾ–ಕ್ಷಿತಿ–ಶನೈಶ್ಚರ–ಪುಷ್ಕರರಿಗೆ
ಆನತಿಸಿ ಬಿನ್ನಯಿಸುವೆನು, ಭಕ್ತಿ ಜ್ಞಾನ ಕೊಡಲೆಂದು ॥ ೨೬ ॥

ನೂರು ಅಧಿಕವು ಆಗಿಪ್ಪ ಮತ್ತೆ ಹದಿನಾರು ಸಾವಿರ ನಂದ ಗೋಪ ಕುಮಾರನ
ಅರ್ಧಾಂಗಿಯರು, ಅಗಸ್ತ್ಯ ಆದೀ ಮುನೀಶ್ವರರು,
ಊರ್ವಶೀ ಮೊದಲಾದ ಅಪ್ಸರ ನಾರಿಯರು, ಶತ ತುಂಬುರರು,
ಕಂಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಎನ್ನಿಂದ ॥ ೨೭ ॥

ಪಾವನರು ಶುಚಿ ಶುದ್ಧ ನಾಮಕ ದೇವತೆಗಳು, ಆಜಾನ ಚಿರ–ಪಿತೃ,
ದೇವ ನರ ಗಂಧರ್ವರು, ಅವನಿ–ಪ, ಮಾನುಷ–ಉತ್ತಮರು,
ಈ ವಸುಮತಿಯೊಳು ಉಳ್ಳ ವೈಷ್ಣವರ ಆವಳಿಯೊಳು ಇಹನು ಎಂದು,
ನಿತ್ಯದಿ ಸೇವಿಪುದು ಸಂತೋಷದಿಂ ಸರ್ವ ಪ್ರಕಾರದಲಿ ॥ ೨೮ ॥

ಮಾನುಷ–ಉತ್ತಮರನ ವಿಡಿದು ಚತುರಾನನ ಅಂತ ಶತ ಉತ್ತಮತ್ವ,
ಕ್ರ ಮೇಣ ಚಿಂತಿಪ ಭಕ್ತರಿಗೆ ಚತುರ ವಿಧ ಪುರುಷ–ಅರ್ಥ,
ಶ್ರೀ–ನಿಧಿ ಜಗನ್ನಾಥ ವಿಠಲ ತಾನೆ ವೊಲಿದು ಈವನು,
ನಿರಂತರ ಸಾನು–ರಾಗದಿ ಪಠಿಸುವುದು ಸಂತರಿದ ಮರೆಯದಲೆ ॥ ೨೯ ॥

॥ ಇತಿ ಶ್ರೀ ಗುಣತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ಆರೋಹಣ ತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಭಕ್ತರು ಎನಿಸುವ ದಿವ್ಯ ಪುರುಷರ ಉಕ್ತಿ ಲಾಲಿಸಿ ಪೇಳ್ದ,
ಮುಕ್ತ–ಅಮುಕ್ತ ಜೀವರ ತಾಮತಮ್ಯವ ಮುನಿಪ ಶಾಂಡಿಲ್ಯ ॥

ಸ್ಥಾವರರ ನೋಡಲ್ಕೆ ತೃಣ ಕ್ರಿಮಿ ಜೀವರು ಉತ್ತಮ,
ಕ್ರಿಮಿಗಳಿಂದಲಿ ಆವಿ–ಗೋ–ಗಜ–ವ್ಯಾಘ್ರಗಳಿಂದ ಶೂದ್ರ ಆದಿ ಮೂವರು ಉತ್ತಮ,
ಕರ್ಮಿಕರ ಭೂ–ದೇವರು ಉತ್ತಮ, ಕರ್ಮಿ ನೋಡಲು ಕೋವಿದ ಉತ್ತಮ,
ಕವಿಗಳಿಂದಲಿ ಕ್ಷಿತಿಪರು ಉತ್ತಮರು ॥ ೧ ॥

ಧರಣಿ–ಪ–ರ ನೋಡಲ್ಕೆ ನರ ಗಂಧರ್ವರು ಉತ್ತಮ,
ದೇವ ಗಂಧರ್ವರ ಗುಣ ಉತ್ತಮರು, ಇವರಿಗಿಂತ ಶತ–ಊನ–ಶತ–ಕೋಟಿ ಪರಮ ಋಷಿಗಳು,
ಅಪ್ಸರ ಸ್ತ್ರೀಯರು ಸಮಾನರು, ಇವರಿಗಿಂತಲಿ
ಚಿರ–ಪಿತೃಗಳು ಉತ್ತಮರು, ಚಿರ ನಾಮಕ ಪಿತೃಗಳಿಂದ ॥ ೨ ॥

ಎರದು ಅಯಿದು ಎಂಭತ್ತು ಋಷಿ–ತುಂಬರ ಶತ–ಊರ್ವಶಿ ಅಪ್ಸರ ಸ್ತ್ರೀಯರು–
ಶತ ಆಜಾನಜರು ಉತ್ತಮ ಚಿರ–ಪಿತೃಗಳಿಂದ,
ಅವರರು ಊರ್ವಶಿಗಿಂತ ವೈಶ್ವಾನರನ ಸುತರು ಈರು–ಎಂಟು ಸಾವಿರ,
ಹರದಿಯರೊಳು ಉತ್ತಮ ಕಶೇರು ಯೆಪ್ಪತ್ತು ನಾಲ್ಕುಜನ ॥ ೩ ॥

ಸರಿಯೆನಿಪರು ವ್ರಜ–ಔಕಸ ಸ್ತ್ರೀಯರು, ಸುರ–ಆಸ್ಯ–ಆತ್ಮ–ಜ–ರಿಗಿಂ ಪುಷ್ಕರನು,
ಕರ್ಮಪ ಪುಷ್ಕರನಿಗೆ ಶನೈಶ್ಚರ ಉತ್ತಮನು,
ತರಣಿ–ಜ–ನಿಗೆ ಉತ್ತಮಳು ಉಷ, ಅಶ್ವಿನಿ ಸುರ–ಅರಸಿಗೆ ಉತ್ತಮ ಜಲ–ಪ ಬುಧ,
ಶರಧಿ–ಜ ಆತ್ಮ–ಜ–ಗೆ ಉತ್ತಮ ಸ್ವಹ ದೇವಿ ಯೆನಿಸುವಳು ॥ ೪ ॥

ಅನಳ ಭಾರ್ಯಳಿಗಿಂತ ಅನಾಖ್ಯಾತ ಅನಿಮಿಷ ಉತ್ತಮರು,
ಇವರಿಗಿಂತಲಿ ಘನಪ ಪರ್ಜನ್ಯ–ಅನಿರುದ್ಧನ ಸ್ತ್ರೀ ಉಷಾದೇವಿ–
ದ್ಯುನದಿ–ಸಂಜ್ಞಾ–ಶಾಮಲಾ–ರೋಹಿಣಿಗಳು ಆರ್ವರು ಸಮಾನ,
ಅನಾಖ್ಯಾತ ಅನಿಮಿಷ ಉತ್ತಮರು, ಇವರಿಗಿಂತಲಿ ನೂರು ಕರ್ಮಜರು ॥ ೫ ॥

ಪೃಥು–ನಹುಷ–ಶಶಿಬಿಂದು–ಪ್ರಿಯ ವ್ರತ–ಪರೀಕ್ಷಿತ ನೃಪರು,
ಭಾಗೀರಥಿಯ ನೋಡಲ್ಕೆ ಅಧಿಕ, ಬಲ್ಯಾದಿ ಇಂದ್ರ ಸಪ್ತಕರು,
ಪಿತೃಗಳು ಏಳು, ಎಂಟು ಅಧಿಕ ಅಪ್ಸರ ಸತಿಯರು, "ಈರು ಐದು ಒಂದು" ಮನುಗಳು,
ದಿತಿ–ಜ ಗುರು–ಚಾವನ–ಉಚಿತ್ಥ್ಯರು ಕರ್ಮಜರು ಸಮರು ॥ ೬ ॥

ಧನಪ–ವಿಷ್ವಕ್ಸೇನ–ಗಣಪಾ–ಅಶ್ವಿನಿಗಳು–ಎಂಭತ್ತು ಐದು ಶೇಷರಿಗೆ
ಎಣೆ ಯೆನಿಸುವರು ಮಿತ್ರ–ತಾರಾ–ನಿರಋತಿ–ಪ್ರಾವಹಿ ಗುಣ–ಗಳಿಂದ
ಐದಧಿಕ ಯೆಂಭತ್ತು ಎನಿಪ ಶೇಷರಿಗೆ ಉತ್ತಮರು,
ಸನ್–ಮುನಿ ಮರೀಚಿ–ಪುಲಸ್ತ್ಯ–ಪುಲಹಾ–ಕ್ರತು–ವಸಿಷ್ಠ ಮುಖ ॥ ೭ ॥

ಅತ್ರಿ–ಅಂಗಿರರು ಏಳು ಬ್ರಹ್ಮನ ಪುತ್ರರು ಇವರಿಗೆ ಸಮರು
ವಿಶ್ವಾಮಿತ್ರ–ವೈವಸ್ವತನು ಈಶ ಆವೇಶ ಬಲದಿಂದ,
ಮಿತ್ರಗಿಂತ ಉತ್ತಮರು ಸ್ವಾಹಾ ಭರ್ತೃ–ಭೃಗುವು–ಪ್ರಸೂತಿ
ವಿಶ್ವಾಮಿತ್ರ ಮೊದಲಾದವರಿಗಿಂತಲಿ ಮೂವರು ಉತ್ತಮರು ॥ ೮ ॥

ನಾರದ ಉತ್ತಮನು ಅಗ್ನಿಗಿಂತಲಿ, ವಾರಿ–ನಿಧಿ ಪಾದ ಉತ್ತಮನು,
ಯಮ–ತಾರಕ ಈಶ–ದಿವಾಕರರು–ಶತರೂಪರು ತ್ತಮರು,
ವಾರಿ–ಜ ಆಪ್ತನಿಗಿಂತ ಪ್ರವಹಾ ಮಾರುತ ಉತ್ತಮ,
ಪ್ರವಹಗಿಂತಲಿ ಮಾರಪುತ್ರ ಅನಿರುದ್ಧ–ಗುರು–ಮನು–ದಕ್ಷ–ಶಚಿ–ರತಿಯು ॥ ೯ ॥

ಆರು ಜನರುಗಳಿಂದಲಿ ಆಹಂಕಾರಿಕ ಪ್ರಾಣ ಉತ್ತಮ,
ಅಖಿಳ ಶರೀರ–ಮಾನಿ ಪ್ರಾಣಗಿಂತಲಿ ಕಾಮ,
ಇಂದ್ರರಿಗೆ ಗೌರಿ ವಾರುಣಿ ಖಗ–ಪ ರಾಣಿಗೆ, ಶೌರಿ ಮಹಿಷಿಯರ ಒಳಗೆ
ಜಾಂಬವತೀ ರಮಾ–ಯುತಳು ಆದ ಕಾರಣ ಅಧಿಕಳು ಎನಿಸುವಳು ॥ ೧೦ ॥

ಹರ ಫಣಿ–ಪ ವಿಹಗ–ಇಂದ್ರ ಮೂವರು ಹರಿ ಮಡದಿಯರಿಗೆ ಉತ್ತಮ,
ಸೌಪರಣಿ–ಪತಿಗೆ ಉತ್ತಮರು ಭಾರತಿ ವಾಣಿ ಈರ್ವರಿಗೆ,
ಮರುತ ಬ್ರಹ್ಮರು ಉತ್ತಮರು, ಇಂದಿರೆಯು ಪರಮ ಉತ್ತಮಳು,
ಲಕ್ಷ್ಮಿಗೆ ಸರಿ ಯೆನಿಸುವವರು ಇಲ್ಲವು, ಎಂದಿಗು ದೇಶ–ಕಾಲದೊಳು ॥ ೧೧ ॥

ಶ್ರೀ ಮುಕುಂದನ ಮಹಿಳೆ ಲಕುಮಿ ಮಹಾ ಮಹಿಮೆಗೆ ಏನೆಂಬೆ,
ಬ್ರಹ್ಮ–ಈಶ–"ಅಮರ ಇಂದ್ರರ" ಸೃಷ್ಟಿ ಸ್ಥಿತಿ ಲಯಗೈಸಿ,
ಅವರ ಅವರ ಧಾಮಗಳ ಕಲ್ಪಿಸಿ ಕೊಡುವಳು, ಅ–ಜರಾ–ಮರಣಳು ಆಗಿದ್ದು,
ಸರ್ವ ಸ್ವಾಮಿ ಮಮ ಗುರುವು ಎಂದು ಉಪಾಸನೆ ಮಾಳ್ಪಳು ಅಚ್ಯುತನ ॥ ೧೨ ॥

ಈಸು ಮಹಿಮೆಗಳು ಉಳ್ಳ ಲಕ್ಷ್ಮಿ, ಪರ-ಈಶನ ಅನಂತ-ಅನಂತ ಗುಣದೊಳು,
ಲೇಶ-ಲೇಶಕೆ ಸರಿ ಯೆನಿಸಳು ಆವ-ಆವ ಕಾಲದಲಿ,
ದೇಶ-ಕಾಲ ಅತೀತ ಲಕ್ಷ್ಮಿಗೆ ಕೇಶವನ ವಕ್ಷ-ಸ್ಥಳವೆ ಅವಕಾಶ ವಾಯಿತು,
ಇವನ ಮಹಿಮೆಗೆ-ವ್ಯಾಪ್ತಿಗೆ ಎಣೆ-ಯುಂಟೆ ॥ ೧೩ ॥

ಒಂದು ರೂಪದೊಳು, ಒಂದು ಅವಯುವದೊಳು, ಒಂದು ರೋಮದೊಳು,
ಒಂದು ದೇಶದಿ ಪೊಂದಿಕೊಂಡಿಹರು ಅಜ-ಭವಾದಿ ಸಮಸ್ತ ಜೀವ ಗಣ,
ಸಿಂಧು-ಸಪ್ತ ದ್ವೀಪ-ಮೇರು-ಸುಮಂದರ ಆದಿ ಅದ್ರಿಗಳು,
ಬ್ರಹ್ಮ ಪುರಂದರ ಆದಿ ಸಮಸ್ತ ಲೋಕ ಪರ ಆಲಯುಗಳು ಎಲ್ಲ ॥ ೧೪ ॥

ಸರ್ವ ದೇವ ಉತ್ತಮನು, ಸರ್ವ-ಗ, ಸರ್ವ ಗುಣ ಸಂಪೂರ್ಣ, ಸರ್ವ-ದ,
ಸರ್ವ ತಂತ್ರ ಸ್ವತಂತ್ರ, ಸರ್ವ ಆಧಾರ, ಸರ್ವ ಆತ್ಮ,
ಸರ್ವತೋ-ಮುಖ, ಸರ್ವ ನಾಮಕ, ಸರ್ವ ಜನ ಸಂ-ಪೂಜ್ಯ, ಶಾಶ್ವತ,
ಸರ್ವ ಕಾಮ-ದ, ಸರ್ವ ಸಾಕ್ಷಿ-ಗ, ಸರ್ವ-ಜಿತ್ ಸರ್ವ ॥ ೧೫ ॥

ತಾರತಮ್ಯ-ಆರೋಹಣವ ಬರೆದು ಆರು ಪಠಿಸುವರೊ ಅವರ,
ಲಕ್ಷ್ಮೀ ನಾರಸಿಂಹ ಸಮಸ್ತ ದೇವ ಗಣ ಅಂತರ ಆತ್ಮಕನು,
ಪೂರಯಿಸುವ ಮನೋ-ರಥಂಗಳ, ಕಾರುಣಿಕ ಕೈವಲ್ಯ ದಾಯಕ,
ದೂರ ಗೈಪ ಸಮಸ್ತ ದುರಿತವ, ವೀತ-ಶೋಕ ಸುಖ ॥ ೧೬ ॥

ಪ್ರಣತ ಕಾಮದನ ಅಂಘ್ರಿ ಸಂದರುಶನದ ಅಪೇಕ್ಷೆಯು ಉಳ್ಳವಗೆ,
ನಿಚ್ಚಣಿಕೆ ಯೆನಿಪುದು ಜಡ ಮೊದಲು ಬ್ರಹ್ಮಾಂಡ ತರತಮವು,
ಮನ-ವಚನದಿಂ ಸ್ಮರಿಸುವರ ಭವ-ವನಧಿ ಶೋಷಿಸಿ ಪೋಗುವುದು,
ಕಾರಣವು ಎನಿಸುವುದು, ಜ್ಞಾನ-ಭಕ್ತಿ-ವಿರಕ್ತಿ ಸಂಪದಕೆ ॥ ೧೭ ॥

ಅನಳನೊಳು ಹೋಮಿಸುವ ಹರಿಚಂದನವೆ ಮೊದಲಾದ ಅದರ ಸುವಾಸನೆಯು
ಪ್ರತ್-ಪ್ರತ್ಯೇಕ ತೋರ್ಪುದು ಎಲ್ಲ ಕಾಲದಲಿ,
"ದನು ಜ"-ಮಾನವ-"ದಿವಿ ಜ"ರ ಅವರ-ಅವರ ಅನುಚಿತ-ಉಚಿತ ಕರ್ಮ,
ವೃಜಿನ ಅರ್ದನನು ವ್ಯಕ್ತಿಯು ಮಾಳ್ಪ, ತ್ರಿ-ಗುಣ ಅತೀತ, ವಿಖ್ಯಾತ ॥ ೧೮ ॥

ಭಕ್ತ ವತ್ಸಲ, ಭಾಗ್ಯ ಪುರುಷ, ವಿವಿಕ್ತ, ವಿಶ್ವ ಆಧಾರ,
ಸರ್ವ ಉದ್ರುಕ್ತ, ದೃಷ್ಟ-ಅದೃಷ್ಟ, ದುರ್ಗಮ, ದುರ್-ವಿ-ಭಾವ್ಯ, ಸ್ವಹಿ,
ಶಕ್ತ, ಶಾಶ್ವಿತ, ಸಕಲ ವೇದೈಕ ಉಕ್ತ, ಮಾನ-ದ, ಮಾನ್ಯ, ಮಾಧವ,
ಸೂಕ್ತ-ಸೂಕ್ಷ್ಮ-ಸ್ಥೂಲ ಶ್ರೀ ಜಗನ್ನಾಥ ವಿಠಲನು ॥ ೧೯ ॥

॥ ಇತಿ ಶ್ರೀ ಆರೋಹಣ ತಾರತಮ್ಯ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಕರ್ಮವಿಮೋಚನ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಮೂಲ ನಾರಾಯಣನು, ಮಾಯಾ ಲೋಲ ಅನಂತ ಅವತಾರ ನಾಮಕ,
ವ್ಯಾಳ ರೂಪ ಜಯಾ ರಮಣನ ಆವೇಶನು ಎನಿಸುವನು,
ಲೀಲೆಗೈವ ಅನಂತ ಚೇತನ ಜಾಲದೊಳು ಪ್ರದ್ಯುಮ್ನ,
ಬ್ರಹ್ಮ–ಅಂಡ ಆಲಯದ ವೊಳ–ಹೊರಗೆ ನೆಲೆಸಿಹ ಶಾಂತಿ ಅನಿರುದ್ಧ ॥ ೧ ॥

ಐದು ಕಾರಣ ರೂಪ ಇಪ್ಪತ್ತು ಐದು ಕಾರ್ಯಗಳು ಎನಿಸುವವು,
ಆರು ಐದು ರೂಪದಿ ರಮಿಸುತ ಇಪ್ಪನು ಈ ಚರ–ಅಚರದಿ,
ಭೇದ ವರ್ಜಿತ, ಮೂರ್–ಜಗದ್–ಜನ್ಮ ಆದಿ ಕಾರಣ, ಮುಕ್ತಿ ದಾಯಕ,
ಸ್ವ–ಉದರದೊಳು ಇಟ್ಟು ಎಲ್ಲರನು ಸಂತೈಪ ಸರ್ವಜ್ಞ ॥ ೨ ॥

ಕಾರ್ಯ ಕಾರಣ ಕರ್ತೃಗಳೊಳು ಸ್ವ–ಭಾರ್ಯರಿಂದ ಒಡಗೂಡಿ,
ಕಪಿಲ–ಆಚಾರ್ಯ ಕ್ರೀಡಿಸುತ ಇಪ್ಪ ತನ್ನೊಳು ತಾನೆ ಸ್ವೇಚ್ಛೆಯಲಿ,
ಪ್ರೇರ್ಯನು ಅಲ್ಲೆ ರಮ–ಅಬ್ಜ ಭವರು ಆರ್ಯ ರಕ್ಷಿಸಿ ಶಿಕ್ಷಿಸುವನು,
ಸ್ವ–ವೀರ್ಯದಿಂದಲಿ ದಿವಿ–ಜ ದಾನವ ತತಿಯ ದಿನ–ದಿನದಿ ॥ ೩ ॥

ಈ ಸಮಸ್ತ ಜಗತ್ತಿನ ಒಳಗೆ ಆಕಾಶದೊಳು ಇರುತಿಪ್ಪ,
ವ್ಯಾಪ್ತ–ಆವೇಶ ಅವತಾರ ಅಂತರಾತ್ಮಕನು ಆಗಿ ಪರಮ–ಆತ್ಮ,
ನಾಶ ರಹಿತ ಜಗತ್ತಿನೊಳಗೆ ಅವಕಾಶದನು ತಾನಾಗಿ
ಯೋಗೀಶ ಆಶಯ ಸ್ಥಿತ ತನ್ನೊಳು ಎಲ್ಲರನು ಇಟ್ಟು ಸಲಹುವನು ॥ ೪ ॥

ದಾರು–ಪಾಷಾಣಗತ ಪಾವಕ ಬೇರೆ ಬೇರೆ ಇಪ್ಪಂತೆ,
ಕಾರಣ ಕಾರ್ಯಗಳ ವೊಳಗೆ ಇದ್ದು ಕಾರಣ ಕಾರ್ಯನು ಎಂದೆನಿಸಿ,
ತೋರಿ–ಕೊಳ್ಳದೆ ಎಲ್ಲರೊಳು ವ್ಯಾಪಾರ ಮಾಡುವ,
ಯೋಗ್ಯತೆಗಳ ಅನುಸಾರ ಫಲಗಳ ಉಣಿಸಿ ಸಂತೈಸುವ ಕೃಪಾ–ಸಾಂದ್ರ ॥ ೫ ॥

ಊರ್ಮಿಗಳ ವೋಲ್ ಇಪ್ಪ, ಕರ್ಮ ವಿ–ಕರ್ಮ ಜನ್ಯ ಫಲ–ಅಫಲಂಗಳ,
ನಿರ್ಮಲ–ಆತ್ಮನು ಮಾಡಿ ಮಾಡಿಸಿ ಉಂಡು ಉಣಿಸುತ ಇಪ್ಪ,
ನಿರ್–ಮಮ, ನಿರ್–ಆಮಯ, ನಿರ್–ಆಶ್ರಯ, ಧರ್ಮ–ವಿತು ಧರ್ಮ–ಆತ್ಮ ಧರ್ಮ–ಗ,
ದುರ್ಮತೀ ಜನರ ಒಲ್ಲನು, ಅಪ್ರತಿ–ಮಲ್ಲ, ಶ್ರೀ–ನಲ್ಲ ॥ ೬ ॥

ಜಲದ ವಡ–ಬಾನಳಗಳು ಅಂಬುಧಿ ಜಲವನು ಉಂಬುವುವು,
ಅಬ್ದ ಮಳೆ–ಗರೆ ದಿಳಿಗೆ ಶಾಂತಿಯನು ಈವುದು, ಅನಲನು ತಾನೆ ಭುಂಜಿಪುದು,
ತಿಳಿವುದು ಈ ಪರಿಯಲ್ಲಿ, ಲಕ್ಷ್ಮೀ–ನಿಲಯ ಗುಣ ಕೃತ ಕರ್ಮ–ಜ
ಫಲ–ಅಫಲಗಳು ಉಂಡು ಉಣಿಸುವನು ಸರ್ವ–ಗ ಸರ್ವ ಜೀವರಿಗೆ ॥ ೭ ॥

ಪುಸ್ತಕಗಳ ಅವಲೋಕಿಸುತ, ಮಂತ್ರ ಸ್ತುತಿಗಳ ಅನಲೇನು,
ರವಿಯ ಉದಯ–ಅಸ್ತ ಮಯ ಪರಿಯಂತ ಜಪಗಳ ಮಾಡಿ ಫಲವೇನು,
ಹೃಸ್ಥ ಪರಮ–ಆತ್ಮನೆ, ಸಮಸ್ತ–ಅವಸ್ಥೆಗಳೊಳು ಇದ್ದು ಎಲ್ಲರೊಳಗೆ,
ನಿರಸ್ತ ಕಾಮನು, ಮಾಡಿ ಮಾಡಿಪನು ಎಂದು ತಿಳಿಯದವ ॥ ೮ ॥

ಮದ್ಯ ಭಾಂಡವ ದೇವ ನದಿಯೊಳಗೆ ಅದ್ದಿ ತೊಳೆಯಲು ನಿತ್ಯದಲಿ
ಪರಿಶುದ್ಧವು ಆಹುದೆ ಎಂದಿಗೆ ಆದರು,
ಹರಿ ಪದ ಅಬ್ಜಗಳ ಬುದ್ಧಿ ಪೂರ್ವಕ ಭಜಿಸ–ದವಗೆ ವಿರುದ್ಧವು ಎನಿಸುವವು ಎಲ್ಲ,
ಕರ್ಮ ಸಮೃದ್ಧಿಗಳು ದು:ಖವನೆ ಕೊಡುತಿಹವು ಅಧಮ ಜೀವರಿಗೆ ॥ ೯ ॥

ಭಕ್ತಿ ಪೂರ್ವಕವಾಗಿ ಮುಕ್ತ–ಅಮುಕ್ತ ನೀಯಾಮಕನ
ಸರ್ವ–ಉದ್ರಿಕ್ತ ಮಹಿಮೆಗಳ ಅನವರತ ಕೊಂಡಾಡು ಮರೆಯದಲೆ,
ಸಕ್ತನು ಆಗದೆ ಲೋಕವಾರ್ತೆ ಪ್ರಸಕ್ತಿಗಳನು ಈಡಾಡಿ,
ಶ್ರುತಿ ಸ್ಮೃತಿ ಉಕ್ತ ಕರ್ಮವ ಮಾಡುತಿರು ಹರಿಯ ಆಜ್ಞೆಯೆಂದರಿದು ॥ ೧೦ ॥

ಲೋಪವು ಆದರು ಸರಿಯೆ, ಕರ್ಮ–ಜ ಪಾಪ–ಪುಣ್ಯಗಳು ಎರಡು ನಿನ್ನನು ಲೇಪಿಸವು,
ನಿಷ್–ಕಾಮಕನು ನೀನಾಗಿ ಮಾಡುತಿರೆ,
ಸೌಪರಣಿ ವರ–ವಹನ ನಿನ್ನ ಮಹ–ಅಪರಾಧಗಳ ಎಣಿಸದಲೆ,
ಸ್ವರ್ಗ ಆಪವರ್ಗವ ಕೊಟ್ಟು ಸಲಹುವ ಸತತ ಸುಖ–ಸಾಂದ್ರ ॥ ೧೧ ॥

ಸ್ವ–ರತ, ಸುಖಮಯ, ಸುಲಭ, ವಿಶ್ವಂಭರ, ವಿಶೋಕ, ಸುರ–ಅಸುರ ಅರ್ಚಿತ ಚರಣ ಯುಗ,
ಚಾರು–ಅಂಗ, ಶಾರ್ಙ್ಗ, ಶರಣ್ಯ, ಜಿತಮನ್ಯು,
ಪರಮ ಸುಂದರ ತರ, ಪರಾತ್ಪರ, ಶರಣ–ಜನ ಸುರ ಧೇನು, ಶಾಶ್ವತ, ಕರುಣಿ,
ಕಂಜ ದಳ ಆಕ್ಷ, ಕಾಯೆನೆ, ಕಂಗೊಳಿಪ ಶೀಘ್ರ ॥ ೧೨ ॥

ನಿರ್-ಮಮನು ನೀನಾಗಿ, ಕರ್ಮ ವಿ-ಕರ್ಮಗಳನು ನಿರಂತರದಿ
ಸು-ಧರ್ಮ ನಾಮಕಗೆ ಅರ್ಪಿಸುತ ನಿಷ್-ಕಲುಷ ನೀನಾಗು,
ಭರ್ಮ ಗರ್ಭನ ಜನಕ, ದಯದಲಿ ದುರ್ಮತಿಗಳನು ಕೊಡದೆ,
ತನ್ನಯ ಹರ್ಮ್ಯದೊಳಗೆ ಇಟ್ಟು, ಎಲ್ಲ ಕಾಲದಿ ಕಾವ ಕೃಪೆ ಯಿಂದ ॥ ೧೩ ॥

ಕಲ್ಪ ಕಲ್ಪದಿ ಶರಣ ಜನ ವರ ಕಲ್ಪ ವೃಕ್ಷನು,
ತನ್ನ ನಿಜ ಸಂಕಲ್ಪದ ಅನುಸಾರದಲಿ ಕೊಡುತ ಇಪ್ಪನು ಫಲ-ಅಫಲವ,
ಅಲ್ಪ ಸುಖದ ಆಪೇಕ್ಷೆಯಿಂದ ಅಹಿತಲ್ಪನ ಆರಾಧಿಸದಿರು ಎಂದಿಗು,
ಶಿಲ್ಪಿಗನ ಕೈ ಸಿಕ್ಕ ಶಿಲೆಯಂದದಲಿ ಸಂತೈಪ ॥ ೧೪ ॥

ದೇಶ ಭೇದ ಆಕಾಶದಂದದಿ, ವಾಸುದೇವನು ಸರ್ವ ಭೂತ ನಿವಾಸಿ ಯೆನಿಸಿ,
ಚರ-ಅಚರ ಆತ್ಮಕನು ಎಂದು ಕರೆಸುವನು,
ದ್ವೇಷ-ಸ್ನೇಹ-ಉದಾಸೀನಗಳು ಇಲ್ಲ ಈ ಶರೀರಗಳೊಳಗೆ,
ಅವರ ಉಪಾಸನಗಳಂದದಲಿ ಫಲವೀವನು ಪರ-ಬ್ರಹ್ಮ ॥ ೧೫ ॥

ಸಂಚಿತ-ಆಗಾಮಿಗಳ ಕರ್ಮ ವಿರಿಂಚಿ ಜನಕನ ಭಜಿಸೆ ಕೆಡುವವು,
ಮಿಂಚಿನ ಅಂದದಿ ಪೊಳೆವ ಪುರುಷ-ಉತ್ತಮ ಹೃದಯ ಅಂಬರದಿ,
ವಂಚಿಸುವ ಜನರ ಒಲ್ಲ, ಶ್ರೀ-ವತ್ಸ-ಆಂಚಿತ ಸುಸದ್-ವಕ್ಷ,
ತಾ ನಿಷ್-ಕಿಂಚನ ಪ್ರಿಯ, ಸುರ-ಮುನಿ-ಗೇಯ, ಶುಭ-ಕಾಯ ॥ ೧೬ ॥

ಕಾಲ-ದ್ರವ್ಯ-"ಸು ಕರ್ಮ" ಶುದ್ಧಿಯ ಪೇಳುವರು ಅಲ್ಪರಿಗೆ,
ಅವು ನಿರ್ಮೂಲ ಗೈಸುವವು ಅಲ್ಲ ಪಾಪಗಳ ಎಲ್ಲ ಕಾಲದಲಿ,
ತೈಲ ಧಾರೀಯಂತ ಅವನ ಪದ ಓಲಯಿಸಿ ತುತಿಸದಲೆ ನಿತ್ಯದಿ,
ಬಾಲಿಶರು ಕರ್ಮಗಳೆ ತಾರಕವು ಎಂದು ಪೇಳುವರು ॥ ೧೭ ॥

"ಕಮಲ ಸಂಭವ"-ಶರ್ವ-ಶಕ್ರ ಆದಿ ಅಮರರು ಎಲ್ಲರು,
ಇವನ ದುರತಿಕ್ರಮ ಮಹಿಮೆಗಳ ಮನ-ವಚನ-ದಿಂ ಪ್ರಾಂತ-ಗಾಣದಲೆ,
ಶ್ರಮಿತರು ಆಗಿ ಪದ-ಅಬ್ಜ-ಕಲ್ಪ-ದ್ರುಮದ ನೆಳಲ ಆಶ್ರಯಿಸಿ,
ಲಕ್ಷ್ಮೀ-ರಮಣ ಸಂತೈಸು ಎಂದು ಪ್ರಾರ್ಥಿಪರು ಅತಿ ಭಕುತಿ-ಯಿಂದ ॥ ೧೮ ॥

ವಾರಿ-ಚರವು ಎನಿಸುವವು ದರ್ದುರ, ತಾರಕಗಳು ಎಂದರಿದು
ಭೇಕವನು ಏರಿ ಜಲ-ಧಿಯ ದಾಟುವೆನು ಯೆಂಬುವನ ತೆರದಂತೆ,
ತಾರತಮ್ಯ ಜ್ಞಾನ ಶೂನ್ಯರು, ಸೂರಿ-ಗಮ್ಯನ ತಿಳಿಯಲು ಅರಿಯದೆ,
ಸೌರ-ಶೈವ ಮತಾನುಗರ ಅನುಸರಿಸಿ ಕೆಡುತ ಇಹರು ॥ ೧೯ ॥

ಕ್ಷೋಣಿ-ಪತಿ ಸುತನು ಎನಿಸಿ, ಕೈ-ದುಗ್ಗಾಣಿಗೆ-ಒಡ್ಡುವ ತೆರದಿ,
ಸು-ಮನಸ ಧೇನು ಮನೆಯೊಳಗೆ ಇರಲು ಗೋ-ಮಯ ಬಯಸುವಂದದಲಿ,
ವೇಣು-ಗಾನ-ಪ್ರಿಯನ ಅಹಿಕ ಸುಖ-ಅನುಭವ ಬೇಡದಲೆ,
ಲಕ್ಷ್ಮೀ-ಪ್ರಾಣ-ನಾಥನ ಪಾದ ಭಕುತಿಯ ಬೇಡು, ಕೊಂಡಾಡು ॥ ೨೦ ॥

ಕ್ಷುಧೆಯ-ಗೋಸುಗ ಪೋಗಿ, ಕಾನನ ಬದರಿ ಫಲಗಳ ಅಪೇಕ್ಷೆ-ಯಿಂದಲಿ ।
ಪೊದೆಯೊಳಗೆ ಸಿಗ ಬಿದ್ದು ಬಾಯ್ದೆರದವನ ತೆರದಂತೆ,
ವಿಧಿ-ಪಿತನ ಪೂಜಿಸದೆ, ನಿನ್ನಯ ಉದರ-ಗೋಸುಗ,
ಸಾಧು-ಲಿಂಗ-ಪ್ರದರುಶಕರ ಆರಾಧಿಸುತ ಬಳಲದಿರು ಭವದೊಳಗೆ ॥ ೨೧ ॥

ಜ್ಞಾನ-ಜ್ಞೇಯ-ಜ್ಞಾತೃವು ಎಂಬ ಅಭಿಧಾನದಿಂ ಬುದ್ಧಿ ಆದಿಗಳ ಅಧಿಷ್ಠಾನದಲಿ ನೆಲೆಸಿ ಇದ್ದು,
ಕರೆಸುತ ತತ್ತದ್-ಆಹ್ವಯದಿ,
ಭಾನುಮಂಡಲ-ಗ ಪ್ರದರ್ಶಕ ತಾನು ಎನಿಸಿ ವಶನಾಗುವನು,
ಶುಕ-ಶೌನಕ ಆದಿ ಮುನಿ-ಇಂದ್ರ, ಹೃದಯ ಆಕಾಶ-ಗತ ಚಂದ್ರ ॥ ೨೨ ॥

ಉದಯ ವ್ಯಾಪಿಸಿ ದರ್ಶ-ಪೌರ್ಣಿಮ, ಅಧಿಕ ಯಾಮವು, ಶ್ರವಣ ಅಭಿಜಿತು ।
ಸದನವು ಐದಿರೆ, ಮಾಳ್ಪ ತೆರದಂದದಲಿ ಹರಿಸೇವೆ,
ವಿಧಿ-ನಿಷೇಧಗಳು ಎನು ನೋಡದೆ ವಿಧಿಸುತಿರು,
ನಿತ್ಯದಲಿ ತನ್ನಯ ಸದನದೊಳಗೆ ಇಂಬಿಟ್ಟು ಸಲಹುವ ಭಕ್ತ-ವತ್ಸಲನು ॥ ೨೩ ॥

ನಂದಿ-ವಾಹನ ರಾತ್ರಿ, ಸಾಧನೆ ಬಂದ ದ್ವಾದಶಿ, ಪೈತೃಕ ಸಂಧಿಸಿಹ ಸಮಯದಲಿ,
ಶ್ರವಣವ ತ್ಯಜಿಸುವಂತೆ ಸದಾ,
ನಿಂದ್ಯರಿಂದಲಿ ಬಂದ ದ್ರವ್ಯವ ಕಂ-ದೆರದು ನೋಡದಲೆ,
ಶ್ರೀಮದ್-ಆನಂದ ತೀರ್ಥ ಅಂತರ್ಗತನ ಸರ್ವತ್ರ ಭಜಿಸುತಿರು ॥ ೨೪ ॥

ಶ್ರೀ-ಮನೋರಮ, ಮೇರು, ತ್ರಿ-ಕಕುದ್-ಧಾಮ, ಸತ್-ಕಲ್ಯಾಣ-ಗುಣ, ನಿಸ್ಸೀಮ,
ಪಾವನ ನಾಮ, ದಿವಿ-ಜ ಉದ್ಧಾಮ, ರಘು ರಾಮ,
ಪ್ರೇಮ ಪೂರ್ವಕ ನಿತ್ಯ ತನ್ನ ಮಹಾ ಮಹಿಮೆಗಳ ತುತಿಸುವರಿಗೆ,
ಸುಧಾಮಗೆ ಒಲಿದಂದದಲಿ ಅಖಿಳ ಅರ್ಥಗಳ ಕೊಡುತ ಇಪ್ಪ ॥ ೨೫ ॥

ತಂದೆ ತಾಯ್ಗಳ ಕುರುಹನು ಅರಿಯದ ಕಂದ, ದೇಶ-ಅಂತರದೊಳಗೆ ತನ್ನಂದದಲಿ
ಯಿಪ್ಪವರ ಜನನೀ ಜನಕರನು ಕಂಡು,
ಹಿಂದೆ ಯೆನ್ನನು ಪಡೆದ ಅವರು ಈ ಯಂದದಲಿ ಯಿಪ್ಪರೊ ಅಲ
ನಾನು ಅವರ ಎಂದು ಕಾಣುವೆನು ಎನುತ ಹುಡುಕುವ ತೆರದಿ ಕೋವಿದರು ॥ ೨೬ ॥

ಶ್ರುತಿ–ಪುರಾಣ ಸಮೂಹದೊಳು, ಭಾರತ ಪ್ರತಿ–ಪ್ರತಿ ಪದಗಳೊಳು,
ನಿರ್ಜಿತನ ಗುಣ ರೂಪಗಳ ಪುಡುಕುತ ಪರಮ ಹರುಷದಲಿ,
ಮತಿ–ಮತರು ಪ್ರತಿ ದಿವಸ ಸಾರಸ್ವತ ಸಮುದ್ರದಿ,
ಶಫರಿ–ಯೆಂದದಿ ಸತತ ಸಂಚರಿಸುವರು, ಕಾಣುವ ಲವ–ಲವಿಕೆಯಿಂದ ॥ ೨೭ ॥

ಮತ್ಸ್ಯ ಕೇತನ ಜನಕ, ಹರಿ, ಶ್ರೀವತ್ಸ ಲಾಂಛನ, ನಿಜ ಶರಣ ಜನ ವತ್ಸಲ,
ವರ–ಆರೋಹ, ವೈಕುಂಠ ಆಲಯ ನಿವಾಸಿ,
ಚಿತ್–ಸುಖ–ಪ್ರದ ಸಲಹೆನಲು, ಗೋ ವತ್ಸ–ಧ್ವನಿಗೆ ಒದಗುವ ತೆರದಿ,
ಪರಮ ಉತ್ಸಹದಿ ಬಂದು ಒದಗುವನು, ನಿರ್ಮತ್ಸರರ ಬಳಿಗೆ ॥ ೨೮ ॥

ಸೂರಿಗಳಿಗೆ ಸಮೀಪ–ಗ, ದುರಾಚಾರಿಗಳಿಗೆ ಎಂದೆಂದು ದೂರಾದ್–ದೂರ–ತರ,
ದುರ್ಲಭನು ಎನಿಸುವನು ದೈತ್ಯ ಸಂತತಿಗೆ,
ಸಾರಿ ಸಾರಿಗೆ ನೆನೆವವರ, ಸಂಸಾರ ವೆಂಬ ಮಹೋರಗಕೆ ಸರ್ವ–ಅರಿಯೆನಿಸಿ,
ಸದಾ ಸು–ಸೌಖ್ಯವನು ಈವ ಶರಣರಿಗೆ ॥ ೨೯ ॥

ಚಕ್ರ–ಶಂಖ–ಗದ–ಅಬ್ಜ ಧರ, ದುರತಿಕ್ರಮ, ದುರಾವಾಸ,
ವಿಧಿ–ಶಿವ–ಶಕ್ರ–ಸೂರ್ಯ ಆದ್ಯಿ ಅಮರ ಪೂಜ್ಯ ಪದ ಅಬ್ಜ, ನಿರ್ಲಜ್ಜ,
ಶುಕ್ರ ಶಿಷ್ಯರ ಅಶ್ವ–ಮೇಧಾ–ಪ್ರಕ್ರಿಯವ ಕೆಡಿಸಿ,
ಅಬ್ಜ–ಜ ಅಂಡವ ಅತಿಕ್ರಮಿಸಿ, ಜಾಹ್ನವಿಯ ಪಡೆದ ತ್ರಿವಿಕ್ರಮ ಆಹ್ವಯನು ॥ ೩೦ ॥

ಶಕ್ತರು ಎನಿಸುವರು ಇಲ್ಲ ಹರಿ ವ್ಯತಿರಿಕ್ತ ಸುರ–ಗಣದೊಳಗೆ,
ಸರ್ವ ಉದ್ರಿಕ್ತನು ಎನಿಸುವ ಸರ್ವರಿಂದಲಿ ಸರ್ವ ಕಾಲದಲಿ,
ಭಕ್ತಿ ಪೂರ್ವಕವಾಗಿ ಅನ್ಯ ಪ್ರಸಕ್ತಿಗಳ ನೀಡಾಡಿ,
ಪರಮ ಆಸಕ್ತನು ಆಗಿರು ಹರಿಕಥ ಅಮೃತ ಪಾನ ವಿಷಯದಲಿ ॥ ೩೧ ॥

ಪ್ರಣತ ಕಾಮ–ದ, ಭಕ್ತ ಚಿಂತಾಮಣಿ, ಮಣಿ–ಮಯಾ–ಭರಣ ಭೂಷಿತ,
ಗುಣಿ ಗುಣ ತ್ರಯ ದೂರ ವರ್ಜಿತ, ಗಹನ ಸನ್ಮಹಿಮ,
ಎಣಿಸ ಭಕ್ತರ ದೋಷಗಳ, ಕುಂಭಿಣಿ–ಜೆ–ಯ ಆಣ್ಮ, ಶರಣ್ಯ,
ರಾಮ ಅರ್ಪಣವು ಎನಲು, ಕೈಕೊಂಡ ಶಬರಿಯ ಫಲವ, ಪರಮ ಆತ್ಮ ॥ ೩೨ ॥

ಬಲ್ಲೆನು ಎಂಬುವರು ಇಲ್ಲವು ಈತನ, ಒಲ್ಲೆನು ಎಂಬುವರು ಇಲ್ಲ,
ಲೋಕದೊಳು ಇಲ್ಲದಿಹ ಸ್ಥಳ ವಿಲ್ಲವೈ, ಅಜ್ಞಾತ ಜನರು ಇಲ್ಲ,
ಬೆಲ್ಲದ ಅಚ್ಚಿನ ಬೊಂಬೆ–ಯೆಂದದಿ ಎಲ್ಲರೊಳಗೆ ಇರುತ ಇಪ್ಪ,
ಶ್ರೀ–ಭೂ ನಲ್ಲ, ಇವಗೆ ಎಣೆಯು ಇಲ್ಲ, ಅಪ್ರತಿ–ಮಲ್ಲ, ಜಗಕೆಲ್ಲ ॥ ೩೩ ॥

ಶಬ್ದ-ಗೋಚರ, ಶಾರ್ವರೀಕರ, ಅಬ್ದ-ವಾಹನನ ಅನುಜ,
ಯದು-ವಂಶ-ಅಬ್ಧಿ ಚಂದ್ರಮ, ನಿರುಪಮ, ಸು-ನಿಸ್ಸೀಮ, ಸಮಿತ ಸಮ,
ಲಬ್ಧನು ಆಗುವ ತನ್ನವಗೆ, ಪ್ರಾರಬ್ಧ ಕರ್ಮಗಳ ಉಣಿಸಿ ತೀವ್ರದಿ,
ಕ್ಷುಬ್ಧ ಪಾವಕನ ಅಂತೆ ಬಿಡದೆ ಇಪ್ಪನು, ದಯಾ-ಸಾಂದ್ರ ॥ ೩೪ ॥

ಶ್ರೀ-ವಿರಿಂಚಿ ಆದಿ ಅಮರ ವಂದಿತ, ಈ ವಸುಂಧರೆಯೊಳಗೆ,
ದೇವಕಿ ದೇವಿ ಜಠರದೊಳು ಅವತರಿಸಿದನು ಅಜನು ನರರಂತೆ,
ರೇವತೀ-ರಮಣ-ಅನುಜನು, ಸ್ವ-ಪದ-ಅವಲಂಬಿಗಳನು ಸಲಹಿ,
ದೈತ್ಯ-ಆವಳಿಯ ಸಂಹರಿಸಿದ, ಜಗನ್ನಾಥ ವಿಠಲನು ॥ ೩೫ ॥

॥ ಇತಿ ಶ್ರೀ ಕರ್ಮವಿಮೋಚನ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ಭಕ್ತಾಪರಾಧಸಹಿಷ್ಣು ಸಂಧಿ ॥
॥ ಶ್ರೀ ಸಕಲದುರಿತ ನಿವಾರಣ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀಲಕುಮಿವಲ್ಲಭಗೆ ಸಮ ಕರುಣಾಳುಗಳ ನಾಕಾಣೆನು ಎಲ್ಲಿ,
ಕುಚೇಲನ ಅವಲಿಗೆ ಮೆಚ್ಚಿ ಕೊಟ್ಟನು ಸಕಲ ಸಂಪದವ,
ಕೇಳಿದ ಆ ಕ್ಷಣ ವಸ್ತ್ರಗಳ ಪಾಂಚಾಲಿಗೆ ಇತ್ತನು,
ದೈತ್ಯನ ಉದರವ ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ॥ ೧ ॥

ದೇವಶರ್ಮಾಹ್ವಯ ಕುಟುಂಬಕೆ, ಜೀವನ ಉಪಾಯವನು ಕಾಣದೆ
ದೇವ ದೇವ ಶರಣ್ಯ ರಕ್ಷಿಸು ರಕ್ಷಿಸೆನೆ, ಕೇಲಿ ತಾ ವೊಲಿದು ಪಾಲಿಸಿದ ಸೌಖ್ಯ,
ಕೃಪಾವಲೋಕನದಿಂದ ಈತನ ಸೇವಿಸದೆ,
ಸೌಖ್ಯಗಳ ಬಯಸುವರು ಅಲ್ಪ ಮಾನವರು ॥ ೨ ॥

ಶ್ರೀನಿವಾಸನ ಪೋಲ್ವ ಕರುಣಿಗಳು ಈ ನಳಿನಜ ಅಂಡದೊಳು ಕಾಣೆ,
ಪ್ರವೀಣರಾದವರು ಅರಸಿ ನೋಳ್ಪುದು ಶ್ರುತಿಪುರಾಣದೊಳು,
ದ್ರೋಣ ಭೀಷ್ಮ ಕೃಪಾದಿಗಳು ಕುರು ಸೇನೆಯೊಳಗಿರೆ,
ಅವರ ಅವಗುಣಗಳು ಏನು ನೋಡದೆ ಪಾಲಿಸಿದ ಪರಮಾತ್ಮ ಪರಗತಿಯ ॥ ೩ ॥

ಚಂಡ ವಿಕ್ರಮ ಚಕ್ರ ಶಂಖವ ತೋಂಡಮಾನ ನೃಪಾಲಗೆ ಇತ್ತನು,
ಭಾಂಡಕಾರಕ ಭೀಮನ ಮೃದ ಆಭರಣಗಳಿಗೆ ಒಲಿದ,
ಮಂಡೆ ವಡದ ಆಕಾಶರಾಯನ ಹೆಂಡತಿಯ ನುಡಿಕೇಲಿ ಮಗಳಿಗೆ ಗಂಡನೆನಿಸಿದ,
ಗಹನ ಮಹಿಮ ಗದಾಬ್ಜಧರಪಾಣಿ ॥ ೪ ॥

ಗೌತಮನ ನಿಜಪತ್ನಿಯನು ಪುರುಹೂತನು ಐದಿರೆ ಕಾಯ್ದು,
ವೃತ್ರನ ಘಾತಿಸಿದ ಪಾಪವನು ನಾಲ್ಕು ವಿಭಾಗ ಮಾಡಿದನು,
ಶಾತಕುಂಭ–ಆತ್ಮಕ ಕಿರೀಟವ ಕೈತವದಿ ಕದ್ದೊಯ್ದ ಇಂದ್ರ–ಆರಾತಿ ಬಾಗಿಲ ಕಾಯ್ದು,
ಭಕ್ತತ್ವೇನ ಸ್ವೀಕರಿಸಿ ॥ ೫ ॥

ನಾರ ನಂದ ವ್ರಜದ ಸ್ತ್ರೀಯರ ಜಾರಕರ್ಮಕೆ ಒಲಿದ,
ಅಜ ಸುಕುಮಾರನು ಎನಿಸಿದ ನಂದಗೋಪಗೆ ನಳಿನಭವ ಜನಕ,
ವೈರ ವರ್ಜಿತ–ದೈತ್ಯರನ ಸಂಹಾರ ಮಾಡಿದ,
ವಿಪಗಮನ–ಪೆಗಲೇರಿದನು ಗೋಪಾಲಕರ ವೃಂದಾವನದೊಳಂದು ॥ ೬ ॥

ಶ್ರೀಕರಾರ್ಚಿತ ಪಾದಪಲ್ಲವ, ಗೋಕುಲದ ಗೊಲ್ಲತಿಯರ ಒಲಿಸಿದ,
ಪಾಕಶಾಸನ ಪೂಜ್ಯ, ಗೋ ಗೋವತ್ಸಗಳ ಕಾಯ್ದು,
ನೀಕರಿಸಿ ಕುರುಪತಿಯ ಭೋಜನ, ಸ್ವೀಕರಿಸಿದನು ವಿದುರನೌತನ,
ಬಾಕುಲಿಕನಂದದಲಿ ತೋರಿದ ಭಕ್ತ ವತ್ಸಲನು ॥ ೭ ॥

ಪುತ್ರನು ಎನಿಸಿದ ಗೋಪಿದೇವಿಗೆ, ಭರ್ತೃವೆನಿಸಿದ ವೃಜದನಾರಿಯರ ಉತ್ರಲಾಲಿಸಿ,
ಪರ್ವತವ ನೆಗದಿಹ ಕೃಪಾಸಾಂದ್ರ,
ಶತ್ರು ತಾಪನ, ಯಜ್ಞ ಪುರುಷನ ಪುತ್ರಿಯರ ತಂದಾಳ್ದ,
ತ್ರಿಜಗತ್–ಧಾತ್ರ ಮಂಗಳಗಾತ್ರ ಪರಮ ಪವಿತ್ರ ಸುರಮಿತ್ರ ॥ ೮ ॥

ರುಪನಾಮ ವಿಹೀನ, ಗರ್ಗ ಆರೋಪಿತ ಸುನಾಮದಲಿ ಕರೆಸಿದ,
ವ್ಯಾಪಕ, ಪರಿಚ್ಛಿನ್ನ ರುಪದಿ ತೋರ್ದ ಲೋಗರಿಗೆ,
ದ್ವಾಪರ ಅಂತ್ಯದಿ ದೈತ್ಯರನು ಸಂತಾಪಗೊಳಿಸುವೆನು ಎಂದು,
ಶ್ವೇತದ್ವೀಪ ಮಂದಿರನು, ಅವತರಿಸಿ ಸಲಹಿದನು ತನ್ನವರ ॥ ೯ ॥

ಶ್ರೀ–ವಿರಿಂಚಿ–ಆದಿ ಅಮರ ನುತ, ನಾನಾವತಾರವ ಮಾಡಿ ಸಲಹಿದ
ದೇವತೆಗಳನು ಋಷಿಗಳನು ಕ್ಷಿತಿಪರನು,
ಮಾನವರ ಸೇವಗಳ ಕೈಕೊಂಡು ಫಲಗಳನು ಈವ,
ನಿತ್ಯ ಆನಂದಮಯ, ಸುಗ್ರೀವ ಧೃವ ಮೊದಲಾದ ಭಕ್ತರಿಗೆ ಇತ್ತ ಪುರುಷಾರ್ಥ ॥ ೧೦ ॥

ದುಷ್ಟ ದಾನವ ಹರಣ, ಸರ್ವ ಉತ್ಕೃಷ್ಟ, ಸದ್ಗುಣ ಭರಿತ, ಭಕ್ತ ಅಭೀಷ್ಟದಾಯಕ,
ಭಯ ವಿನಾಶನ, ವಿಗತ ಭಯ–ಶೋಕ,
ನಷ್ಟ–ತುಷ್ಟಿಗಳು ಇಲ್ಲ ಸೃಷ್ಟಿ ಆದಿ ಅಷ್ಟ ಕರ್ತನಿಗೆ ಆವ ಕಾಲದಿ,
ಹೃಷ್ಟನಾಗುವ ಸ್ಮರಣೆ ಮಾತ್ರದಿ ಹೃದ್ಗುಹ ನಿವಾಸಿ ॥ ೧೧ ॥

ಹಿಂದೆ ಪ್ರಳಯ ಉದಕದಿ ತಾವರೆ ಕಂದ ನಂಜಿಸಿ ಕಾಯ್ದು,
ತಲೆಯಲಿ ಬಾಂದೊರೆಯ ಪೊತ್ತವಗೆ ಒಲಿದು ಪರಿಯಂಕ ಪದವಿತ್ತ,
ವಂದಿಸಿದ ವೃಂದಾರಕರ ಸತ್–ವೃಂದಕೆ ಉಣಿಸಿದ ಸುಧೆಯ,
ಕರುಣಾ ಸಿಂಧು, ಕಮಲಾ ಕಾಂತ, ಬಹು ನಿಶ್ಚಿಂತ, ಜಯವಂತ ॥ ೧೨ ॥

ಸತ್ಯ ಸಂಕಲ್ಪ ಅನುಸಾರ ಪ್ರವರ್ತಿಸುವ ಪ್ರಭು, ತನಗೆ ತಾನೆ ಭೃತ್ಯನೆನಿಸುವ,
ಭೋಕ್ತೃ ಭೋಗ್ಯ ಪದಾರ್ಥದೊಳಗೆ ಇದ್ದು ತತ್-ತತ್-ಆಹ್ವಯನಾಗಿ ತರ್ಪಕ,
ತೃಪ್ತಿ ಬಡಿಸುವ ತತ್ವ ಪತಿಗಳ,
ಮತ್ತರಾದ ಅಸುರರ್ಗೆ ಅಸಮೀಚೀನ ಫಲವೀವ ॥ ೧೩ ॥

ಬಿಟ್ಟಿಗಳ ನೆವದಿಂದಡಾಗಲಿ, ಪೊಟ್ಟೆಗೋಸುಗವಾದಡಾಗಲಿ,
ಕೆಟ್ಟರೋಗ ಪ್ರಯುಕ್ತ ವಾಗಲಿ, ಅಣಕದಿಂದೊಮ್ಮೆ ನಿಟ್ಟು ಉಸಿರಿನಿಂ ಬಾಯ್ದೆರದು,
ಹರಿ ವಿಠಲಾ ಸಲಹೆಂದು ಎನಲು, ಕೈಗೊಟ್ಟು ಕಾವ,
ಕೃಪಾಳು ಸಂತತ ತನ್ನ ಭಕುತರನು ॥ ೧೪ ॥

ಈ ವಸುಂಧರೆಯೊಳಗೆ ಶ್ರೀ-ಭೂದೇವಿಯ-ಅರಸನ ಸುಗುಣ ಕರ್ಮಗಳ,
ಆವ ಬಗೆಯಿಂದ ಆದಡಾಗಲಿ ಕೀರ್ತಿಸಿದ ನರರ,
ಕಾವ ಕಮಲ ದಳ ಆಯತ ಅಕ್ಷ ಕೃಪಾವ ಲೋಕನದಿಂದ,
ಕಪಿ ಸುಗ್ರೀವಗೆ ಒಲಿದಂದದಲಿ ವೊಲಿದಭಿಲಾಷೆ ಪೂರೈಪ ॥ ೧೫ ॥

ಚೇತನ ಅಂತರ್ಯಾಮಿ ಲಕ್ಷ್ಮೀನಾಥ ಕರ್ಮಗಳ ಅನುಸರಿಸಿ,
"ಜನಿತೋಥ ವಿಷ್ಣೋಯೆಂಬ" ಶ್ರುತಿ ಪ್ರತಿಪಾದ್ಯ, ಯೆವ್ಮೊಡನೆ ಜಾತನಾಗುವ ಜನ್ಮರಹಿತ,
ಆಕೂತಿನಂದನ, ಭಕ್ತರಿಂದ ಆಹೂತನಾಗಿ,
ಮನೋರಥವ ಬೇಡಿಸಿಕೊಳದೆ ಈವ ॥ ೧೬ ॥

ನೃಷತುಯೆನಿಸುವ ಮನುಜರೊಳು, ಸುರ ಋಷಭ ಇಂದ್ರಿಯಗಳೊಳು,
ತತ್-ತತ್-ವಿಷಯಗಳ ಭುಂಜಿಸುವ ಹೋತಾಹ್ವಯನು ತಾನಾಗಿ,
ಮೃಷರಹಿತ ವೇದದೊಳು ಋತಸತು ಪೆಸರಿನಿಂದಲಿ ಕರೆಸುವ,
ಜಗತ್ಪ್ರಸವಿತ ನಿರಂತರದಿ ಸಂತೈಸುವನು ಭಕುತರನು ॥ ೧೭ ॥

ಅಬ್ಜ ಭವ ಪಿತ ಜಲಧರ ಅದ್ರಿಯೊಳು, ಅಬ್ಜ ಗೋಜ ಅದ್ರಿಜನೆನಿಸಿ,
ಜಲದ ಉಬ್ಬಳೀ ಪೀಯೂಷ ದಾವರೆ ಶ್ರೀಶಶಾಂಕದೊಳು,
ಕಬ್ಬು-ಕದಳಿ-ಲತಾ-ತೃಣ-ದ್ರುಮ ಹೆಬ್ಬಗೆಯ ಮಾಡುತಿಹ ಗೋಜನು,
ಇಬ್ಬಗೆ ಪ್ರತೀಕ ಮಣಿಮೃಗ ಸೃಜಿಪ ಅದ್ರಿಜನು ॥ ೧೮ ॥

ಶ್ರುತಿವಿನುತ ಸರ್ವತ್ರದಲಿ ಭಾರತಿ ರಮಣನೊಳಗೆ ಇದ್ದು,
ತಾ ಶುಚಿಷತು ಯೆನಿಸಿ ಜಡ-ಚೇತನರನ ಪವಿತ್ರ ಮಾಡುತಿಹ,
ಅತುಳ ಮಹಿಮ ಅನಂತ ರೂಪ, ಅಚ್ಯುತನೆನಿಸಿ ಚಿತ್-ದೇಹದೊಳು,
ಪ್ರಾಕೃತ ಪುರುಷನಂದದಲಿ ನಾನಾ ಚೇಷ್ಟೆಗಳ ಮಾಳ್ಪ ॥ ೧೯ ॥

ಅತಿಥಿಯೆನಿಸುವ ಅನ್ನಮಯ ಭಾರತಿ ರಮಣನೊಳು,
ಪ್ರಾಣಮಯ ಪ್ರಾಕೃತ ವಿಷಯ ಚಿಂತನೆಯ ಮಾಡಿಸುವನು,
ಮನೋಮಯನು ಯತನ, ವಿಜ್ಞಾನಮಯ ಬರಲದ ಜತನ ಮಾಡಿಸಿ,
ಆತ್ಮ ಜಾಯಾ ಸುತರ ಸಂಗದಿ ಸುಖವನು ಈವ ಅನಂದಮಯನೆನಿಸಿ ॥ ೨೦ ॥

ಇನಿತು ರೂಪಾತ್ಮನಿಗೆ, ದೋಶಗಳು ಎನಿತು ಬಪ್ಪವು ಪೇಳಿರೈ,
ಬ್ರಾಹ್ಮಣ ಕುಲೋತ್ತಮರು ಆದವರು, ನಿಷ್ಕಪಟ ಬುದ್ಧಿಯಲಿ,
ಗುಣನಿಯಾಮಕ ತತ್-ತತ್-ಆಹ್ವಯ ನೆನಿಸಿ, ಕಾರ್ಯವ ಮಾಳ್ಪದೇವನ,
ನೆನೆದ ಮಾತ್ರದಿ ದೋಷರಾಶಿಗಳು ಎಲ್ಲ ಕೆಡುತಿಹವು ॥ ೨೧ ॥

ಕುಸ್ಥನೆನಿಸುವ ಭೂಮಿಯೊಳು, ಆಶಸ್ಥನೆನಿಸುವ ದಿಗ್ವಲಯದೊಳು,
ಖಸ್ಥನೆನಿಪ ಆಕಾಶದೊಳು, ಒಬ್ಬೊಬ್ಬರೊಳಗೆ ಇದ್ದು ವ್ಯಸ್ತನೆನಿಸುವ,
ಸರ್ವರೊಳಗೆ ಸಮಸ್ತನೆನಿಸುವ, ಬಳಿಯಲಿದ್ದು ಉಪಸ್ಥನೆನಿಪ,
ವಿಶೋಧನ ವಿಶುದ್ಧಾತ್ಮ ಲೋಕದೊಳು ॥ ೨೨ ॥

ಜ್ಞಾನದನು ಯೆಂದೆನಿಪ ಶಾಸ್ತ್ರದಿ, ಮಾನದನು ಯೆಂದೆನಿಪ ವಸನದಿ,
ದಾನಶೀಲ ಸುಬುದ್ಧಿಯೊಳಗೆ (ಅ)ವದಾನ್ಯನೆನಿಸುವನು,
ವೈನತೇಯ ಅವರೂಥ ತತ್-ತತ್-ಸ್ಥಾನದಲಿ ತತ್-ತತ್-ಸ್ವಭಾವಗಳ ಆನುಸಾರ,
ಚರಿತ್ರೆ ಮಾಡುತ ನಿತ್ಯನೆಲೆಸಿಪ್ಪ ॥ ೨೩ ॥

ಗ್ರಾಮಪನ ಒಳು ಅಗ್ರಣಿಯೆನಿಸುವನು, ಗ್ರಾಮಿಣೀ ಯೆನಿಸುವನು ಜನರೊಳು,
ಗ್ರಾಮ ಉಪಗ್ರಾಮ ಗಳೊಳಗೆ ಶ್ರೀಮಾನ್ಯನೆನಿಸುತಿಪ್ಪ,
ಶ್ರೀಮನೋರಮ, ತಾನೆ ಯೋಗ-ಕ್ಷೇಮ ನಾಮಕನಾಗಿ ಸಲಹುವ,
ಈ ಮಹಿಮೆ ಮಿಕ್ಕಾದ ದೇವರಿಗೆ ಉಂಟೆ ಲೋಕದೊಳು ॥ ೨೪ ॥

ವಿಜಯಸಾರಥಿಯೆಂದು ಗರುಡಧ್ವಜನ ಮೂರ್ತಿಯ ಭಕ್ತಿಪೂರ್ವಕ ಭಜಿಸುತಿಪ್ಪ ಮಹಾತ್ಮರಿಗೆ,
ಸರ್ವತ್ರದಲಿ ವೊಲಿದು,
ವಿಜಯದನು ತಾನಾಗಿ ಸಲಹುವ, ಭು-ಜಗ ಭೂಷಣ ಪೂಜ್ಯ ಚರಣಾಂಬುಜ,
ವಿಭೂತಿದ, ಭುವನ ಮೋಹನರೂಪ, ನಿರ್ಲೇಪ ॥ ೨೫ ॥

ಅನಭಿಮತ ಕರ್ಮಪ್ರವಹದೊಳಗೆ ಅನಿಮಿಷಾದಿ ಸಮಸ್ತ ಚೇತನ ಗಣವಿಹುದು,
ತತ್-ಫಲಗಳ ಉಣ್ಣದೆ ಸೃಷ್ಟಿಸಿ(ಸ)ದ ಮುನ್ನ,
ವನಿತೆ ಯಿಂದ ಒಡಗೂಡಿ ಕರುಣಾವನಧಿ ನಿರ್ಮಿಸೆ,
ತಮ್ಮ ತಮ್ಮಯ ಅನುಚಿತ-ಉಚಿತ ಕರ್ಮ ಫಲಗಳ ಉಣುತ ಚರಿಸುವರು ॥ ೨೬ ॥

ಝುಲ್ಲಡಿಯ ನೆಳಲ ಅಂತೆ ತೋರ್ಪುದು ಎಲ್ಲ ಕಾಲದಿ ಭವದ ಸೌಖ್ಯವು,
ಎಲ್ಲಿ ಪೊಕ್ಕರು ಬಿಡದು ಬೆಂಬತ್ತಿ ಇಹುದು ಜೀವರಿಗೆ,
ಒಲ್ಲೆನೆಂದರೆ ಬಿಡದು, ಹರಿ ನಿರ್ಮಾಲ್ಯ ನೈವೇದ್ಯವನು ಭುಂಜಿಸಿ,
ಬಲ್ಲವರ ಕೂಡಾಡು ಭವ ದು:ಖಗಳ ನೀಡಾಡು ॥ ೨೭ ॥

ಕುಟ್ಟಿ ಕೊಯಿದದನು, ಅಟ್ಟು, ಇಟ್ಟು, ಅದಸುಟ್ಟು, ಕೊಟ್ಟದ ಮುಟ್ಟಲು,
ಅಘ ಹಿಟ್ಟಿಟ್ಟು ಮಾಳ್ಪದು ವಿಠಲುಂಡುಚ್ಛಿಷ್ಟ,
ಸಜ್ಜನರ ಬಿಟ್ಟು ತನ್ನಯ ಹೊಟ್ಟೆಗೋಸುಗ ಥಟ್ಟನೆ ಉಣುತಿಹ ಕೆಟ್ಟ ಮನುಜರ,
ಕಟ್ಟಿ ವೈದು ಎಮಪಟ್ಟಣದೊಳು ಒತ್ತಟ್ಟಲೆ ಇಡುತಿಹನು ॥ ೨೮ ॥

ಜಾಗುಮಾಡದೆ ಭೋಗದ ಆಸೆಯ ನೀಗಿ ಪರಮ ಅನುರಾಗದಿಂದಲಿ,
ಭೋಗಿಶಯನನ ಆಗರದ ಹೆಬ್ಬಾಗಿಲಲಿ ನಿಂದು,
ಕೂಗುತಲಿ ಶಿರಬಾಗಿ, ಕರುಣಾ ಸಾಗರನೆ–ಭವರೋಗ ಭೇಷಜ ಕೈಗೊಡು ಎಂದೆನೆ,
ಬೇಗನೆ ಒದಗುವ ಭಾಗವತರರಸ ॥ ೨೯ ॥

ಏನು ಕರುಣವೋ ತನ್ನವರಲಿ ದಯಾ ನಿಧಿಗೆ,
ಸದ್ಭಕ್ತ ಜನರು ಅತಿ ಹೀನ ಕರ್ಮವ ಮಾಡಿದರು ಸರಿ, ಸ್ವೀಕರಿಸಿ ಪೊರೆವ,
ಪ್ರಾಣಹಿಂಸ ಲುಬ್ಧಕಗೆ ಸುಜ್ಞಾನ ಭಕ್ತಿಗಳ ಇತ್ತು,
ದಶರಥ ಸೂನು ವಾಲ್ಮೀಕಿ ಋಷಿಯ ಮಾಡಿದ ಪರಮ ಕರುಣಾಳು ॥ ೩೦ ॥

ಮೂಢ ಮಾನವ ಎಲ್ಲಕಾಲದಿ ಬೇಡಿಕೊಂಬ ಇನಿತೆಂದು ದೈನ್ಯದಿ,
ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ,
ನೀಡುವರೆ(ಡೆ), ನಿನ್ನ ಅಮಲಗುಣ ಕೊಂಡಾಡಿ ಹಿಗ್ಗುವ ಭಾಗವತರ ಒಡನೆ,
ಆಡಿಸೆನ್ನನು ಜನ್ಮಜನ್ಮಗಳಲ್ಲಿ ದಯದಿಂದ ॥ ೩೧ ॥

ಚತುರವಿಧ ಪುರುಷಾರ್ಥ ರೂಪನು ಚತುರ ಮೂರ್ತಿ ಆತ್ಮಕನು ಇರಲು,
ಮತ್ತೆ ಇತರ ಪುರುಷಾರ್ಥಗಳ ಬಯಸುವರೇನು ಬಲ್ಲವರು,
ಮತಿ ವಿಹೀನರು, ಅಲ್ಪ ಸುಖ ಶಾಶ್ವತ ವೆಂದರಿದು ಅನುದಿನದಿ,
ಗಣಪತಿಯೇ ಮೊದಲಾದ ಅನ್ಯ ದೇವತೆಗಳನೆ ಭಜಿಸುವರು ॥ ೩೨ ॥

ಒಮ್ಮೆಗಾದರು ಜೀವರೊಳು ವೈಷಮ್ಯ–ದ್ವೇಷ–ಅಸೂಯವಿಲ್ಲ,
ಸುಧರ್ಮ ನಾಮಕ ಸಂತಯಿಸುವನು ಸರ್ವರನು ನಿತ್ಯ,
ಬ್ರಹ್ಮ ಕಲ್ಪ ಅಂತದಲಿ ವೇದಾಗಮ್ಯ ಶ್ರೀ ಜಗನ್ನಾಥ ವಿಠಲ,
ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯ ॥ ೩೩ ॥

॥ ಇತಿ ಶ್ರೀ ಭಕ್ತಾಪರಾಧಸಹಿಷ್ಣು ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಬೃಹತ್ತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಹರಿ ಸಿರಿ ವಿರಂಚೀರ ಮುಖ ನಿರ್ಜರರ ಆವೇಶ–ಅವತಾರಗಳ
ಸ್ಮರಿಸು ಗುಣಗಳ ಸರ್ವ ಕಾಲದಿ ಭಕ್ತಿ ಪೂರ್ವಕದಿ ॥

ಮೀನ–ಕೂರ್ಮ–ಕ್ರೋಡ–ನರಹರಿ–ಮಾಣವಕ–ಭೃಗುರಾಮ–ದಶರಥ ಸೂನು–
ಯಾದವ–ಬುದ್ಧ–ಕಲ್ಕೀ–ಕಪಿಲ–ವೈಕುಂಠ–
ಶ್ರೀನಿವಾಸ–ವ್ಯಾಸ–ಋಷಭ–ಹಯಾನನಾ–ನಾರಾಯಣೀ–ಹಂಸ–ಅನಿರುದ್ಧ–
ತ್ರಿವಿಕ್ರಮ–ಶ್ರೀಧರ–"ಹೃಷೀಕ ಈಶ" ॥ ೧ ॥

ಹರಿಯು–ನಾರಾಯಣನು–ಕೃಷ್ಣ, ಅಸುರ ಕುಲ ಅಂತಕ, ಸೂರ್ಯ ಸಮಪ್ರಭ,
ಕರೆಸುವನು ನಿರ್ದುಷ್ಟ ಸುಖ ಪರಿ–ಪೂರ್ಣ ತಾನು ಎಂದು,
ಸರುವ ದೇವ–ಉತ್ತಮನು, ಸರ್ವ–ಗ, ಪರಮ ಪುರುಷ, ಪುರಾತನ,
ಜರಾ–ಮರಣ ವರ್ಜಿತ, ವಾಸುದೇವ ಆದಿ ಅಮಿತ ರೂಪ–ಆತ್ಮ ॥ ೨ ॥

ಈ ನಳಿನ–ಭವ ಜನನಿ, ಲಕ್ಷ್ಮೀ, ಜ್ಞಾನ–ಬಲ–ಭಕ್ತಿ ಆದಿ ಗುಣ ಸಂಪೂರ್ಣಳು ಎನಿಪಳು
ಸರ್ವ ಕಾಲದಿ ಹರಿ ಕೃಪಾ ಬಲದಿ,
ಹೀನಳು ಎನಿಪಳು ಅನಂತ ಗುಣದಿ ಪುರಾಣ ಪುರುಷಗೆ,
ಪ್ರಕೃತಿಗೆ ಇನ್ನು ಸಮಾನರು ಎನಿಸುವರು ಇಲ್ಲ ಮುಕ್ತ–ಅಮುಕ್ತ ಸುರರೊಳಗೆ ॥ ೩ ॥

ಗುಣಗಳ ತ್ರಯ ಮಾನಿ, ಶ್ರೀ ಕುಂಭಿಣಿ–ಮಹಾ ದುರ್ಗ–ಅಂಭೃಣೀ–ರುಗ್ಮಿಣಿಯು–
ಸತ್ಯಾ–ಶಾಂತಿ–ಕೃತಿ–ಜಯ–ಮಾಯ–ಮಹಲಕುಮಿ, ಜನಕ–ಜಾ–ಕಮಲ ಆಲಯಾ–
ದಕ್ಷಿಣೆ–ಸುಪದ್ಮಾ–ತ್ರಿಲೋಕ ಈಶ್ವರಿ,
ಅಣು–ಮಹತ್ತಿನ ಒಳಿದ್ದು, ಉಪಮಾ ರಹಿತಳು ಎನಿಸುವಳು ॥ ೪ ॥

ಘೋಟಕ ಆಸ್ಯನ ಮಡದಿಗಿಂತಲಿ, ಹಾಟಕ ಉದರ–ಪವನರು ಈರ್ವರು,
ಕೋಟಿ ಗುಣದಿಂದ ಅಧಮರು ಎನಿಪರು ಆವಕಾಲದಲಿ,
"ಖೇಟ ಪತಿ"–ಶೇಷ–"ಅಮರ ಇಂದ್ರ"ರ ಪಾಟಿಮಾಡದೆ,
ಶ್ರೀಶನ ಕೃಪಾ ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು ॥ ೫ ॥

ಪುರುಷ ಬ್ರಹ್ಮ-ವಿರಿಂಚಿ, "ಮಾಹಾನ್ ಮರುತ"-ಮುಖ್ಯ ಪ್ರಾಣ-ಧೃತಿ-ಸ್ಮೃತಿ-
ಗುರುವರ-ಮಹಾ ಧ್ಯಾತ-ಬಲ-ವಿಜ್ಞಾತ-ವಿಖ್ಯಾತ-ಗರಳಭುಗ್-
ಭವ ರೋಗ ಭೇಷಜ-ಸ್ವರ ವರಣ-ವೇದಸ್ಥ-ಜೀವ ಈಶ್ವರ-
ವಿಭೀಷಣ-ವಿಶ್ವ ಚೇಷ್ಟಕ-ವೀತ ಭಯ-ಭೀಮ ॥ ೬ ॥

ಅನಿಲ-ಸ್ಥಿತಿ-ವೈರಾಗ್ಯ ನಿಧಿ-ರೋಚನ-ವಿಮುಕ್ತಿಗ-ಅನಂದ-ದಶಮತಿ-
ಅನಿಮಿಷ ಈಶ-ಅನಿದ್ರ-ಶುಚಿ-ಸತ್ವ ಆತ್ಮಕ ಶರೀರ-
"ಅಣು ಮಹದ್ ರೂಪ ಆತ್ಮಕ"-ಅಮೃತ-ಹನುಮದ್ ಆದಿ ಅವತಾರ-
ಪದ್ಮಾಸನ ಪದವಿ ಸಂಪ್ರಾಪ್ತ-ಪರಿಸರ-ಆಖಣ ಆಶ್ಮ ಸಮ ॥ ೭ ॥

ಮಾತರಿಶ್ವ-ಬ್ರಹ್ಮರು ಜಗನ್-ಮಾತೆಗೆ ಅಧಮ-ಅಧೀನರು ಎನಿಪರು,
ಶ್ರೀ ತರುಣಿ ವಲ್ಲಭನು ಈರ್ವರೊಳು ಆವ ಕಾಲದಲಿ,
ನೀತ ಭಕ್ತಿ-ಜ್ಞಾನ-ಬಲ-ರೂಪ ಅತಿಶಯದಿಂದ ಇದ್ದು,
ಚೇತನ-ಅಚೇತನಗಳೊಳು ವ್ಯಾಪ್ತರು ಎನಿಪರು ತತ್-ತದ್-ಆಹ್ವಯದಿ ॥ ೮ ॥

ಸರಸ್ವತೀ-ವೇದ ಆತ್ಮಿಕಾ-ಭುಜಿ-ನರಹರೀ ಗುರುಭಕ್ತಿ-ಬ್ರಾಹ್ಮೀ-
ಪರಮ ಸುಖ ಬಲ ಪೂರ್ಣೆ-ಶ್ರದ್ಧಾ-ಪ್ರೀತಿ-ಗಾಯತ್ರೀ,
ಗರುಡ ಶೇಷರ ಜನನಿ, ಶ್ರೀ ಸಂಕರುಷಣನ-ಜಯ ತನುಜೆ,
ವಾಣೀ ಕರಣ ನಿಯಾಮಕೆ, ಚತುರ್-ದಶ ಭುವನ ಸನ್ಮಾನ್ಯೇ ॥ ೯ ॥

ಕಾಳಿ-"ಕಾಶಿ ಜೆ"-"ವಿಪ್ರ ಜೆ"-ಪಾಂಚಾಲಿ-ಶಿವ ಕನ್ಯ- ಇಂದ್ರ ಸೇನಾ-
ಕಾಲಮಾನೀ-ಚಂದ್ರ-ದ್ಯು-ಸಭಾ ನಾಮ ಭಾರತಿಗೆ,
ಫಾಳಿ-ಬ್ರಹ್ಮರ ಯುವತಿಯರು, ಏಳು-ಏಳು ಐವತ್ತು ಒಂದು ಗುಣದಿಂ ಕೀಳರು ಎನಿಪರು
ತಮ್ಮ ಪತಿಗಳಿಂದಲಿ ಆವಾಗ ॥ ೧೦ ॥

ಹರಿ ಸಮೀರ ಆವೇಶ ನರ, ಸಂಕರುಷಣ ಆವೇಶ ಯುತ ಲಕ್ಷ್ಮಣ,
ಪರಮ ಪುರುಷನ ಶುಕ್ಲ ಕೇಶ ಆವೇಶ ಬಲರಾಮ,
ಹರ-ಸದಾ ಶಿವ-ತಪ-ಅಹಂಕೃತು-ಮರುತ ಯುಕ್ತ ಶುಕ-ಊರ್ಧ್ವ-ಅಪಟು-
ತತ್ ಪುರುಷ-ಜೈಗೀಷೌರ್ವ-ದ್ರೌಣೀ-ವ್ಯಾಧ-ದೂರ್ವಾಸ ॥ ೧೧ ॥

ಗರುಡ-ಶೇಷ-"ಶಶಿ ಅಂಕ ದಳ ಶೇಖರ"ರು ತಮ್ಮೊಳು ಸಮರು,
ಭಾರತಿ-"ಸರಸಿ-ಜ ಆಸನ ಪತ್ನಿಗೆ" ಅಧಮರು ನೂರು ಗುಣದಿಂದ,
ಹರಿ ಮಡದಿ ಜಾಂಬವತಿಯೊಳು ಶ್ರೀ ತರುಣಿಯ ಆವೇಶ ವಿಹುದು ಎಂದಿಗು,
ಕೊರತೆ ಯೆನಿಪರು ಗರುಡ-ಶೇಷರಿಗೆ ಐವರು ಐದುಗುಣ ॥ ೧೨ ॥

ನೀಲ-ಭದ್ರಾ-ಮಿತ್ರವಿಂದಾ, ಮೇಲೆ ಎನಿಪ ಕಾಳಿಂದಿ-ಲಕ್ಷಣ
ಬಾಲೆಯರಿಗಿಂದ ಅಧಮ ವಾರುಣಿ-ಸೌಪರಣಿ-ಗಿರಿಜಾ,
ಶ್ರೀ ಲಕುಮಿಯುತ ರೇವತೀ ಶ್ರೀ ಮೂಲ ರೂಪದಿ ಪೇಯಳು ಎನಿಪಳು,
ಶೈಲಜ ಆದ್ಯರು ದಶ ಗುಣ ಅಧಮ ತಮ್ಮ ಪತಿಗಳಿಗೆ ॥ ೧೩ ॥

ನರಹರಿ ಈರ ಆವೇಶ ಸಂಯುತ ನರ-ಪುರಂದರ-ಗಾಧಿ-ಕುಶ-
ಮಂದರದ್ಯುಮ್ನ-ವಿಕುಕ್ಷಿ-ವಾಲೀ, ಇಂದ್ರನ ಅವತಾರ,
ಭರತ ಬ್ರಹ್ಮ ಆವಿಷ್ಟ-ಸಾಂಬ-ಸುದರುಶನ-ಪ್ರದ್ಯುಮ್ನ-
ಸನಕ ಆದ್ಯರೊಳಗೆ ಇಪ್ಪ ಸನತ್ಕುಮಾರನು-ಷಣ್ಮುಖನು ಕಾಮ ॥ ೧೪ ॥

ಈರು ಅಯಿದು ಗುಣ ಕಡಿಮೆ ಪಾರ್ವತಿ ವಾರುಣೀಯರಿಗೆ ಇಂದ್ರ ಕಾಮ,
ಶರೀರ-ಮಾನಿ ಪ್ರಾಣ ದಶ ಗುಣ ಅವರ ಶಕ್ರನಿಗೆ,
ಮಾರಜಾ-ರತಿ-ದಕ್ಷ-ಗುರು-ವೃತ್ರ ಅರಿ ಜಾಯಾ ಶಚಿ-ಸ್ವಯಂಭುವರು
ಆರು ಜನ ಸಮ, ಪ್ರಾಣಗೆ ಅವರರು ಹತ್ತು ಗುಣದಿಂದ ॥ ೧೫ ॥

ಕಾಮ ಪುತ್ರ ಅನಿರುದ್ಧ ಸೀತಾ-ರಾಮನ ಅನುಜ ಶತ್ರುಹನ-ಬಲ ರಾಮನ ಅನುಜ
ಪೌತ್ರ ಅನಿರುದ್ಧನ ಒಳಗೆ ಅನಿರುದ್ಧ,
ಕಾಮ ಭಾರ್ಯಾ ರುಗ್ಮವತಿ-ಸನ್ನಾಮ ಲಕ್ಷಣಳು ಎನಿಸುವಳು,
ಪೌಲೋಮಿ "ಚಿತ್ರ ಅಂಗದೆಯು"-ತಾರಾ ಎರಡು ಪೆಸರುಗಳು ॥ ೧೬ ॥

ತಾರ ನಾಮಕ ತ್ರೈತೆಯೊಳು ಸೀತಾ-ರಮಣನ ಆರಾಧಿಸಿದನು-
ಸಮೀರ ಯುಕ್ತ ಉದ್ಧವನು ಕೃಷ್ಣಗೆ ಪ್ರೀಯ ನೆನಿಸಿದನು-
ವಾರಿಜ ಆಸನ ಯುಕ್ತ ದ್ರೋಣನು, ಮೂರು ಇಳೆಯೊಳು ಬೃಹಸ್ಪತಿಗೆ ಅವತಾರವು ಎಂಬರು,
ಮಹಾ ಭಾರತ ತಾತ್ಪರ್ಯದ ಒಳಗೆ ॥ ೧೭ ॥

ಮನು ಮುಖ ಆದ್ಯರಿಗಿಂತ ಪ್ರವಹಾ ಗುಣದಿ ಪಂಚಕ ನೀಚನು ಎನಿಸುವ,
ಇನ-ಶಶಾಂಕರು-ಧರ್ಮ-ಮಾನವಿ ಎರಡು ಗುಣದಿಂದ ಕನಿಯರು ಎನಿಪರು ಪ್ರವಹಗಿಂತಲಿ,
ದಿನಪ-ಶಶಿ-ಯಮ ಧರ್ಮ ರೂಪಗಳು,
ಅನುದಿನದಿ ಚಿಂತಿಪುದು ಸಂತರು ಸರ್ವ ಕಾಲದಲಿ ॥ ೧೮ ॥

"ಮರುತನ ಆವೇಶಯುತ ಧರ್ಮ ಜ"-ಕರಡಿ-ವಿದುರನು-ಸತ್ಯಜಿತು
ಈರು-ಎರಡು ಧರ್ಮನ ರೂಪ,
ಬ್ರಹ್ಮ ಆವಿಷ್ಟ ಸುಗ್ರೀವ-ಹರಿಯ ರೂಪ ಆವಿಷ್ಟ ಕರ್ಣನು-ತರಣಿಗೆ ಎರಡು ಅವತಾರ,
ಚಂದ್ರಮ ಸುರಪನ ಆವೇಶ ಯುತನು ಅಂಗದನು ಎನಿಸಿ ಕೊಳುತ ಇಪ್ಪ ॥ ೧೯ ॥

ತರಣಿಗಿಂತಲಿ ಪಾದ ಪಾದರೆ ವರುಣ ನೀಚನು,
ಮಹಭಿಷಕು-ದರ್ದುರ-ಸುಶೇಷಣನು-ಶಂತನೂ ನಾಲ್ವರು ವರುಣ ರೂಪ,
ಸುರಮುನೀ ನಾರದನು ಕಿಂಚಿತ್-ಕೊರತೆ ವರುಣಗೆ,
ಅಗ್ನಿ-ಭೃಗು-"ಅಜ ಗೊರಳ ಪತ್ನಿ ಪ್ರಸೂತಿ" ಮೂವರು ನಾರದನಿಗೆ ಅಧಮ ॥ ೨೦ ॥

ನೀಲ-ಧೃಷ್ಟದ್ಯುಮ್ನ-ಲವ ಈ ಲೇಲಿಹಾನನ ರೂಪಗಳು,
ಭೃಗು ಕಾಲಿಲಿ ಒದ್ದದರಿಂದ ಹರಿಯ ವ್ಯಾಧನು ಎನಿಸಿದನು,
ಏಳು ಋಷಿಗಳಿಗೆ ಉತ್ತಮರು, ಮುನಿ ಮೌಳಿ ನಾರದಗೆ ಅಧಮ ಮೂವರು,
ಘಾಳಿಯುತ ಪ್ರಹ್ಲಾದ ಬಾಹ್ಲಿಕರಾಯನು ಎನಿಸಿದನು ॥ ೨೧ ॥

ಜನಪ ಕರ್ಮಜರೊಳಗೆ ನಾರದ ಮುನಿ ಅನುಗ್ರಹ ಬಲದಿ,
ಪ್ರಹ್ಲಾದ್ ಅನಳ-ಭೃಗು-ದಾಕ್ಷಾಯಣಿ ಯರಿಗೆ ಸಮನು ಎನಿಸಿಕೊಂಬ,
ಮನು ವಿವಸ್ವಾನ್-"ಗಾಧಿ ಜ" ಈರ್ವರು ಅನಳಗಿಂತಲಿ ಕಿಂಚಿತು ಅಧಮ,
ಎಣೆ ಯೆನಿಸುವರು ಸಪ್ತ-ಋಷಿಗಳಿಗೆ ಎಲ್ಲ ಕಾಲದಲಿ ॥ ೨೨ ॥

ಕಮಲ ಸಂಭವ ಭವರು ಎನಿಪ ಸಂಯಮಿ ಮರೀಚೀ-ಅತ್ರಿ-ಅಂಗಿರ ಸುಮತಿ
ಪುಲಹಾ-ಕೃತು-ವಸಿಷ್ಠ-ಪುಲಸ್ತ್ಯ ಮುನಿ ಸ್ವಾಹಾ ರಮಣಗೆ ಅಧಮರು,
ಮಿತ್ರ ನಾಮಕ ದ್ಯುಮಣಿ ರಾಹು ಯುಕ್ತ ಭೀಷ್ಮಕ ಯಮಳರೂಪನು-
ತಾರ ನಾಮಕನು ಎನಿಸಿ ತ್ರೈತೆಯೊಳು ॥ ೨೩ ॥

ನಿರಋತಿಗೆ ಎರಡು ಅವತಾರ ದುರ್ಮುಖ-ಹರ ಯುತ ಘಟೋತ್ಕಚನು,
ಪ್ರಾವಹಿ-ಗುರು ಮಡದಿ ತಾರಾ ಸಮರು, ಪರ್ಜನ್ಯಗೆ ಉತ್ತಮರು,
ಕರಿ ಗೊರಳ ಸಂಯುಕ್ತ ಭಗದತ್ತರಸು-ಕತ್ಥನ ಧನಪ ರೂಪಗಳು ಎರಡು,
ವಿಘ್ನಪ ಚಾರುದೇಷ್ಣನು, ಅಶ್ವಿನಿಗಳು ಸಮ ॥ ೨೪ ॥

ದ್ರೋಣ-ಧ್ರುವ-ದೋಷ-ಅರ್ಕ-ಅಗ್ನಿ-ಪ್ರಾಣ-ದ್ಯು-ವಿಭಾವಸುಗಳು ಎಂಟು,
ಕೃಶಾನು ಶ್ರೇಷ್ಠ, ದ್ಯು ನಾಮ ವಸು ಭೀಷ್ಮಾರ್ಯ ಬ್ರಹ್ಮ ಯುತ,
ದ್ರೋಣ ನಾಮಕ ನಂದ ಗೋಪ, ಪ್ರಧಾನ ಅಗ್ನಿಯನು ಉಳಿದು ಏಳು ಸಮಾನರು ಎನಿಪರು,
ತಮ್ಮೊಳಗೆ ಜ್ಞಾನ ಆದಿ ಗುಣದಿಂದ ॥ ೨೫ ॥

ಭೀಮ-ರೈವತ-ಓಜ-ಅಜೈಕಪದ-ಆ ಮಹನ್-ಬಹು ರೂಪಕನು-ಭವ-
ವಾಮ-ಉಗ್ರ-ವೃಷಾಕಪೀ-"ಅಹಿರ್ ಬುಧ್ನಿ" ಯೆನಿಸುತಿಹ ಈ ಮಹಾತ್ಮರ ಮಧ್ಯದಲ್ಲಿ
ಉಮಾ ಮನೋಹರ ಉತ್ತಮನು,
ದಶ ನಾಮಕರು ಸಮರು ಎನಿಸಿ ಕೊಂಬರು ತಮ್ಮೊಳು ಎಂದೆಂದು ॥ ೨೬ ॥

ಭೂರಿ ಅಜೈಕಪ ಪದ ಆಹ್ವ, ಅಹಿರ್ ಬುಧ್ನಿ ಈರು-ಅಯಿದು ರುದ್ರಗಣ ಸಂಯುತ
ಭೂರಿ ಶ್ರವನು ಎಂದೆನಿಪ, ಶಲ ವಿರುಪಾಕ್ಷ ನಾಮಕನು,
ಸೂರಿ ಕೃಪ ವಿಷ್ಕಂಭ, ಸಹದೇವಾ ರಣಾಗ್ರಣಿ,
ಸೋಮದತ್ತನು ತಾ ರಚಿಸಿದ ದ್ವಿ-ರೂಪ ಧರೆಯೊಳು ಪತ್ರ-ತಾಪಕನು ॥ ೨೭ ॥

ದೇವ ಶಕ್ರ ಉರುಕ್ರಮನು ಮಿತ್ರಾ ವರುಣ ಪರ್ಜನ್ಯ ಭಗ
ಪೂಷಾ ವಿವಸ್ವಾನ್ ಸವಿತೃ ಧಾತಾ ಆರ್ಯಮ ತ್ವಷ್ಟೃ,
ದೇವಕೀ ಸುತನಲ್ಲಿ ಸವಿತೃ ವಿಭಾವಸೂ ಸುತ ಭಾನುಯೆನಿಸುವ,
ಜ್ಯಾವನ-ಪ ಯುತ ವೀರಸೇನನು ತ್ವಷ್ಟೃ ನಾಮಕನು ॥ ೨೮ ॥

ಎರಡು ಅಧಿಕ ದಶ ಸೂರ್ಯರೊಳು, ಮೂರು ಎರಡು ಜನರು ಉತ್ತಮ,
ವಿವಸ್ವಾನ್-ವರುಣ-ಶಕ್ರ-ಉರುಕ್ರಮನು-ಪರ್ಜನ್ಯ-ಮಿತ್ರಾಖ್ಯ,
ಮರುತನ ಆವೇಶ ಯುತ ಪಾಂಡೂವರ ಪರಾವಹನು ಎಂದೆನಿಪ,
ಕೇಸರಿ "ಮೃಗ ಪ"-ಸಂಪಾತಿ-ಶ್ವೇತ ತ್ರಯರು ಮರುದ್-ಅಂಶ ॥ ೨೯ ॥

ಪ್ರತಿಭವ ಆತನು ಚೇಕಿತನು, ವಿಪೃಥುವು ಎನಿಸುವನು ಸೌಮ್ಯ ಮಾರುತ,
ವಿತತ ಸರ್ವ ಉತ್ತುಂಗ-ಗಜ ನಾಮಕರು ಪ್ರಾಣ ಅಂಶ,
ದ್ವಿತಿಯ ಪಾನ ಗವಾಕ್ಷ, ಗವಯ ತೃತಿಯ ವ್ಯಾನ,
ಉದಾನ ವೃಷಪರ್ವ, ಅತುಳ ಶರ್ವತ್ರಾತ-"ಗಂಧ ಸುಮಾದನ"ರು ಸಮಾನ ॥ ೩೦ ॥

ಐವರ ಒಳಗೆ ಈ ಕುಂತಿ ಭೋಜನು ಆವಿ ನಾಮಕ, ನಾಗ-ಕೃಕಲನು-
ದೇವದತ್ತ-ಧನಂಜಯರು ಅವತಾರ ವರ್ಜಿತರು,
ಆವಹ-ಉದ್ವಹ-ವಿವಹ-ಸಂವಹ ಪ್ರಾವಹೀ ಪತಿ ಮರುತ ಪ್ರವಹನಿಗೆ
ಆವಕಾಲಕು ಕಿಂಚಿತು ಅಧಮರು ಮರುದ್-ಗಣರು ಎಲ್ಲ ॥ ೩೧ ॥

ಪ್ರಾಣ-ಪಾನ-ವ್ಯಾನೋ-ದಾನ-ಸಮಾನರ ಐವರನು ಉಳಿದು ಮರುತರು ಊನರು ಎನಿಪರು,
ಹತ್ತು ವಿಶ್ವೇದೇವರು ಇವರಿಂದ ಸೂನುಗಳು ಯೆನಿಸುವರು
ಐವರ ಮಾನಿನೀ ದ್ರೌಪತಿಗೆ,
ಕೆಲವರು ಕ್ಷೋಣಿಯೊಳು ಕೈಕೇಯರು ಎನಿಪರು ಎಲ್ಲ ಕಾಲದಲಿ ॥ ೩೨ ॥

ಪ್ರತಿ ವಿಂದ್ಯ-ಶ್ರುತ ಸೋಮ-ಶ್ರುತ ಕೀರುತಿ-ಶತಾನಿಕ-ಶ್ರುತ ಕರ್ಮ,
ದ್ರೌಪತಿ ಕುವರರು ಇವರೊಳಗೆ ಅಭಿತಾಮ್ರ ಪ್ರಮುಖ-ಚಿತ್ರ ರಥನು-ಗೋಪ-ಕಿಶೋರ-
ಬಲರೆಂಬ ಅತುಲರು ಐ ಗಂಧರ್ವರಿಂದಲಿ ಯುತರು,
ಧರ್ಮ ವೃಕೋದರ ಆದಿ-ಜ-ರು ಎಂದು ಕರೆಸುವರು ॥ ೩೩ ॥

ವಿವಿದ-ಮೈಂದರು ನಕುಲ-ಸಹದೇವ ವಿಭು-ತ್ರಿಶಿಖ ಅಶ್ವಿನಿಗಳು ಇವರೊಳು,
ದಿವಿಪನ ಆವೇಶವು ಇಹುದು ಎಂದಿಗು,
ದ್ಯಾವಾ-ಪೃಥ್ವಿ-ಋಭು-ಪವನ ಸುತ ವಿಷ್ವಕ್ಸೇನನು-ಉಮಾ ಕುವರ ವಿಘ್ನಪ-
"ಧನ ಪ" ಮೊದಲಾದವರು ಮಿತ್ರಗೆ ಕಿಂಚಿತು ಅಧಮರು ಎನಿಸಿಕೊಳುತ ಇಹರು ॥ ೩೪ ॥

ಪಾವಕ ಅಗ್ನಿ ಕುಮಾರನು ಎನಿಸುವ ಚಾವನ-ಉಚಿಥ್ಯ ಮುನಿ,
ಚಾಕ್ಷುಷ-ರೈವತ-ಸ್ವಾವರೋಚಿಷ-ಉತ್ತಮ-ಬ್ರಹ್ಮ-ರುದ್ರ-ಇಂದ್ರ-
ದೇವ-ಧರ್ಮನು-ದಕ್ಷ ನಾಮಕ-ಸಾವರ್ಣಿ, ಶಶಿಬಿಂದು-ಪೃಥು-
ಪ್ರೀಯವ್ರತನು-ಮಾಂಧಾತ-ಗಯನು-ಕಕುಸ್ಥ-ದೌಷ್ಯಂತಿ ॥ ೩೫ ॥

ಭರತ ಋಷಭ-ಜ ಹರಿಣಿ-ಜ ದ್ವಿಜ ಭರತ ಮೊದಲಾದ ಅಖಿಳರಾಯರೊಳಿ
ಇರುತಿಹುದು ಶ್ರೀ ವಿಷ್ಣು ಪ್ರಾಣ ಆವೇಶ ಪ್ರತಿದಿನದಿ,
ವರ ದಿವಸ್ಪತಿ-ಶಂಭು:-ಅದ್ಭುತ ಕರೆಸುವನು-ಬಲಿ-ವಿಧೃತ-ಧೃತ-
ಶುಚಿ ನೆರೆಖಲೂ-ಕೃತಧಾಮ ಮೊದಲಾದ ಅಷ್ಟ ಗಂಧರ್ವ ॥ ೩೬ ॥

ಅರಸುಗಳು ಕರ್ಮಜರು ವೈಶ್ವಾನರಗೆ ಅಧಮ ಶತ ಗುಣದಿ,
ವಿಘ್ನೇಶ್ವರಗೆ ಕಿಂಚಿದ್ ಗುಣ ಕಡಿಮೆ ಬಲಿ ಮುಖ್ಯ ಪಾವಕರು,
ಶರಭ ಪರ್ಜನ್ಯ ಆಖ್ಯ ಮೇಘ-ಪ, ತರಣಿ ಭಾರ್ಯಾ ಸಂಜ್ಞೆ-
ಶಾರ್ವರಿಕರನ ಪತ್ನೀ ರೋಹಿಣೀ-ಶಾಮಲಾ ದೇವಕಿಯು ॥ ೩೭ ॥

ಅರಸಿಯೆನಿಪಳು ಧರ್ಮರಾಜಗೆ, ವರುಣ ಭಾರ್ಯ ಉಷ ಆದಿ ಷಟ್ಕರು
ಕೊರತೆ ಯೆನಿಪರು ಪಾವಕ ಆದ್ಯರಿಗೆ ಎರಡು ಗುಣದಿಂದ,
ಎರಡು ಮೂರ್ ಜನರಿಂದ ಅಧಮ ಸ್ವಹ ಕರೆಸುವಳು,
ಉಷಾದೇವಿ ವೈಶ್ವಾನರನ ಮಡದಿಗೆ ದಶ ಗುಣ ಅವರಳು ಅಶ್ವಿನೀ ಭಾರ್ಯಾ ॥ ೩೮ ॥

ಸುದರುಶನ ಶಕ್ರ ಆದಿ ಸುರ ಯುತ ಬುಧನು ತಾನು ಅಭಿಮನ್ಯುವು ಎನಿಸುವ,
ಬುಧನಿಗಿಂತ ಅಶ್ವಿನೀ ಭಾರ್ಯ ಶಲ್ಯ-ಮಾಗಧರ ಉದರ-ಜ,
ಉಷಾ ದೇವಿಗಿಂತಲಿ ಅಧಮನು ಎನಿಪ ಶನ್ಯೈಶ್ಚರನು,
ಶನಿಗೆ ಅಧಮ ಪುಷ್ಕರ ಕರ್ಮಪನು ಯೆನಿಸುವನು ಬುಧರಿಂದ ॥ ೩೯ ॥

ಉದ್ವಹಾ ಮರುತಾನ್ವಿತ ವಿರಾಧ ದ್ವಿತಿಯ ಸಂಜಯನು ತುಂಬುರ,
"ವಿದ್ವದ್ ಉತ್ತಮ" ಜನ್ಮೇಜಯ ತ್ವಷ್ಟೃಯುತ ಚಿತ್ರರಥ,
ಸದ್ ವಿನುತ "ದಮ ಘೋಷಕ"-ಕಬಂಧ ದ್ವಯರು ಗಂಧರ್ವ ದನು,
"ಮನು-ಪದ್ಮ ಸಂಭವ" ಯುತ ಅಕ್ರೂರ ಕಿಶೋರನು ಎನಿಸುವನು ॥ ೪೦ ॥

ವಾಯು ಯುತ ಧೃತರಾಷ್ಟ್ರ ದಿವಿಜರ ಗಾಯಕನು ಧೃತರಾಷ್ಟ್ರ,
ನಕ್ರನು–ರಾಯ ದ್ರುಪದನು ವಹ ವಿಶಿಷ್ಟಾ ಹೂಹು ಗಂಧರ್ವ,
ನಾಯಕ ವಿರಾಡ್ ವಿವಹ ಹಾಹಾಜ್ಞೇಯ,
ವಿದ್ಯಾಧರನೆ ಅಜಗರ ತಾ ಯೆನಿಸುವನು, ಉಗ್ರಸೇನನೆ ಉಗ್ರಸೇನ ಆಖ್ಯ ॥೪೧ ॥

ಬಿಸ–ಜ ಸಂಭವ ಯುಕ್ತ ವಿಶ್ವಾವಸು ಯುಧಾಮನ್ಯು,
ಉತ್ತ ಮೌಜಸ ಬಿಸ–ಜ ಮಿತ್ರ ಅರ್ಯಮ ಯುತ ಪರಾವಸು ಯೆನಿಸುತ ಇಪ್ಪ,
ಅಸಮ ಮಿತ್ರ ಅನ್ವಿತನು ಸತ್ಯಜಿತು ವಸುಧಿಯೊಳು ಚಿತ್ರಸೇನ,
ಅಮೃತ ಅಂಧಸರು ಗಾಯಕರು ಎಂದು ಕರೆಸುವರು ಆವ ಕಾಲದಲಿ ॥ ೪೨ ॥

ಉಳಿದ ಗಂಧರ್ವರುಗಳು ಎಲ್ಲರು ಬಲಿ ಮೊದಲು ಗೋಪಾಲರು ಎನಿಪರು,
ಇಳೆಯೊಳಗೆ ಸೈರೇಂಧ್ರಿ ಪಿಂಗಳೆ ಅಪ್ಸರ ಸ್ತ್ರೀಯಳು,
ತಿಲೋತ್ತಮೆಯು ಪೂರ್ವದಲಿ ನಕುಲನ ಲಲನೆ ಪಾರ್ವತಿ ಯೆನಿಸುವಳು,
ಗೋ–ಕುಲದ ಗೋಪಿಯರು ಎಲ್ಲ ಶಬರೀ ಮುಖ್ಯ ಅಪ್ಸರರು ॥ ೪೩ ॥

ಕೃಷ್ಣ–ವರ್ತ್ಮನ ಸುತರೊಳಗೆ, ಶತ–ದ್ವ–ಅಷ್ಟ ಸಾವಿರ ಸ್ತ್ರೀಯರಲ್ಲಿ,
ಪ್ರವಿಷ್ಟಳು ಆಗಿ ರಮಾಂಬ ತತ್–ತನ್–ನಾಮ ರೂಪದಲಿ ಕೃಷ್ಣ–ಮಹಿಷಿಯರೊಳಗೆ ಇಪ್ಪಳು,
ತ್ವಷ್ಟೃ ಪುತ್ರಿ ಕಶೇರು ಇವರೊಳು ಶ್ರೇಷ್ಠಳು ಎನಿಪಳು,
ಉಳಿದ ಋಷಿ ಗಣ ಗೋಪಿಕಾ ಸಮರು ॥ ೪೪ ॥

ಸೂನುಗಳು ಯೆನಿಸುವರು ದೇವ ಕೃಶಾನುವಿಗೆ ಕ್ರಥು–ಸಿಂಧು–ಶುಚಿ–ಪವಮಾನ–
ಕೌಶಿಕರು ಐದು, ತುಂಬುರು–ಊರ್ವಶೀ ಶತರು, ಮೇನಕೀ ಋಷಿ ರಾಯರುಗಳು
ಆಜಾನು ಸುರರಿಗೆ ಸಮರು ಎನಿಪರು,
ಸುರಾಣಕರು ಅನಾಖ್ಯಾತ ದಿವಿಜರ ಜನಕರು ಎನಿಸುವರು ॥ ೪೫ ॥

ಪಾವಕರಿಗಿಂತ ಅಧಮರು ಎನಿಸುವ ದೇವ ಕುಲ–ಜ ಅನಾಖ್ಯ ಸುರಗಣ ಕೋವಿದರು,
ನಾನಾ ಸುವಿದ್ಯದಿ ಸ–ಉತ್ತಮರ ನಿತ್ಯ ಸೇವಿಪರು ಸದ್ಭಕ್ತಿ ಪೂರ್ವಕ,
ಸ್ವ–ಅವರರಿಗೆ ಉಪದೇಶಿಸುವರು,
ನಿರಾವಲಂಬನ ವಿಮಲ ಗುಣಗಳ ಪ್ರತಿ ದಿವಸದಲ್ಲಿ ॥ ೪೬ ॥

ಸುರರೊಳಗೆ ವರ್ಣ–ಆಶ್ರಮಗಳು ಎಂಬ ಎರಡು ಧರ್ಮಗಳು ಇಲ್ಲ,
ತಮ್ಮೊಳು ನಿರುಪಮರು ಯೆಂದೆನಿಸಿ ಕೊಂಬರು ತಾರತಮ್ಯದಲಿ,
ಗುರು ಸುಶಿಷ್ಯತ್ವವು ಈ ಋಷಿಗಳೊಳಗೆ ಇರುತಿಹುದು,
ಆಜಾನ ಸುರರಿಗೆ ಚಿರ ಪಿತೃ ಶತ ಅಧಮರು ಎನಿಸುವರು ಏಳು ಜನರ ಉಳಿದು ॥ ೪೭ ॥

ಚಿರ ಪಿತೃಗಳಿಂದ ಅಧಮ ಗಂಧರ್ವರುಗಳು ಎನಿಪರು,
ದೇವ ನಾಮಕ ಕೊರತೆ ಯೆನಿಸುವ, ಚಕ್ರವರ್ತಿಗಳಿಂದ ಗಂಧರ್ವ
ನರರೊಳು ಉತ್ತಮರು ಎನಿಸುವರು, ಹನ್ನೆರಡು ಎಂಭತ್ತು ಎಂಟು ಗುಣದಲಿ
ಹಿರಿಯರು ಎನಿಪರು ಕ್ರಮದಿ ದೇವ ಆವೇಶ ಬಲದಿಂದ ॥ ೪೮ ॥

ದೇವತೆಗಳಿಂ ಪ್ರೇಷ್ಯರು ಎನಿಪರು ದೇವ ಗಂಧರ್ವರುಗಳು,
ಇವರಿಂದ ಆವ ಕಾಲಕು ಶಿಕ್ಷಿತರು ನರ ನಾಮ ಗಂಧರ್ವ,
ಕೇವಲ ಅತಿ ಸದ್-ಭಕ್ತಿ ಪೂರ್ವಕ, ಯಾವದ್-ಇಂದ್ರಿಯಗಳ ನಿಯಾಮಕ
ಶ್ರೀ-ವರನೆ ಎಂದು ಅರಿದು, ಭಜಿಪರು ಮಾನುಷ-ಉತ್ತಮರು ॥ ೪೯ ॥

ಬಾದರಾಯಣ ಭಾಗವತ ಮೊದಲಾದ ಶಾಸ್ತ್ರಗಳಲ್ಲಿ ಬಹು ವಿಧ
"ದ್ವಾ ದಶ"-ದಶ-"ಸು ಪಂಚ ವಿಂಶತಿ"-ಶತ-ಸಹಸ್ರ ಯುತ ಭೇದಗಳ ಪೇಳಿದನು,
ಸ-ಉತ್ತಮ ಆದಿತೇಯ ಆವೇಶ ಬಲದಿ, ವಿರೋಧ ಚಿಂತಿಸ ಬಾರದು,
ಇದು ಸಾಧು ಜನ ಸಮ್ಮತವು ॥ ೫೦ ॥

ಇವರು ಮುಕ್ತಿ ಯೋಗ್ಯರು ಎಂಬರು, ಶ್ರವಣ-ಮನನ ಆದಿಗಳ
ಪರಮ-ಉತ್ಸವದಿ ಮಾಡುತ ಕೇಳಿ ನಲಿಯುತ,
ಧರ್ಮ-ಕಾಮ-ಅರ್ಥ ತ್ರಿವಿಧ ಫಲವ ಅಪೇಕ್ಷಿಸದೆ, ಶ್ರೀಪವನ ಮುಖ ದೇವ ಅಂತರ-ಆತ್ಮಕ
ಪ್ರವರ-ತಮ ಶಿಷ್ಟ-ಇಷ್ಟ-ದಾಯಕನು ಎಂದು ಸ್ಮರಿಸುವರು ॥ ೫೧ ॥

ನಿತ್ಯ ಸಂಸಾರಿಗಳು ಗುಣ ದೋಷ-ಆತ್ಮಕರು,
ಬ್ರಹ್ಮ ಆದಿ ಜೀವರ ಭೃತ್ಯರು ಎಂಬರು ರಾಜನ ಉಪಾದಿಯಲಿ ಹರಿಯೆಂಬ,
ಕೃತ್ತಿ ವಾಸನು-ಬ್ರಹ್ಮ-ಶ್ರೀ ವಿಷ್ಣು ತ್ರಯರು ಸಮ,
ದು:ಖ ಸುಖ ಉತ್ಪತ್ತಿ ಮೃತಿ ಭವ ಪೇಳುವರು ಅವತಾರಗಳಿಗೆ ಸದಾ ॥ ೫೨ ॥

ತಾರತಮ್ಯ ಜ್ಞಾನವು ಇಲ್ಲದೆ ಸೂರಿಗಳ ನಿಂದಿಸುತ ನಿತ್ಯದಿ
ತೋರುತ ಇಪ್ಪರು ಸುಜನರ ಉಪಾದಿಯಲಿ ನರರ ಒಳಗೆ,
ಕ್ರೂರ ಕರ್ಮ ಆಸಕ್ತರು ಆಗಿ, ಶರೀರ ಪೋಷಣೆ ಗೋಸುಗದಿ
ಸಂಚಾರ ಮಾಳ್ಪರು ಅನ್ಯ ದೇವತೆ ನೀಚರ ಆಲಯದಿ ॥ ೫೩ ॥

ದಶ ಪ್ರಮತಿ ಮತ ಅಬ್ಧಿಯೊಳು ಸುಮನಸರು ಎನಿಪ ರತ್ನಗಳನು
ಅವಲೋಕಿಸಿ ತೆಗೆದು ಪ್ರಾಕೃತ ಸುಭಾಷಾ ತಂತುಗಳ ರಚಿಸಿ,
ಅಸುಪತಿ ಶ್ರೀ-ರಮಣನಿಗೆ ಸಮರ್ಪಿಸಿದೆ, ಸತ್-ಜನರು ಇದನು ಸಂತೋಷಿಸಲಿ,
ದೋಷಗಳ ಎಣಿಸದಲೆ ಕಾರುಣ್ಯದಲಿ ನಿತ್ಯ ॥ ೫೪ ॥

ನಿರುಪಮನು ಶ್ರೀವಿಷ್ಣು, ಲಕ್ಷ್ಮೀ-"ಸರಸಿ ಜ ಉದ್ಭವ"-ವಾಯು-ವಾಣೀ-
ಗರುಡ-ಷಣ್ ಮಹಿಷಿಯರು-ಪಾರ್ವತಿ-ಶಕ್ರ-ಸ್ಮರ-ಪ್ರಾಣ-ಗುರು-
ಬೃಹಸ್ಪತಿ-ಪ್ರವಹ-ಸೂರ್ಯನು-ವರುಣ-ನಾರದ-ವಹ್ನಿ-ಸಪ್ತ ಅಂಗಿರರು-
ಮಿತ್ರ-ಗಣೇಶ-ಪೃಥು-ಗಂಗಾ-ಸ್ವಾಹಾ-ಬುಧನು ॥ ೩೩ ॥

ತರಣಿ ತನಯ ಶನೈಶ್ಚರನು-ಪುಷ್ಕರನು-"ಅಜಾನ ಜ"-ಚಿರ ಪಿತರು-
ಗಂಧರ್ವರು-ಈರ್ವರು ದೇವ ಮಾನುಷ ಚಕ್ರವರ್ತಿಗಳು-
ನರರೊಳು ಉತ್ತಮ-ಮಧ್ಯಮ-ಅಧಮ ಕರೆಸುವರು, ಮಧ್ಯ-ಉತ್ತಮರು
ಈರು-ಎರಡು ಜನ ಕೈವಲ್ಯ ಮಾರ್ಗಸ್ಥರಿಗೆ ಆನಮಿಪೆ ॥ ೩೪ ॥

ಸಾರ ಭಕ್ತಿ ಜ್ಞಾನದಿಂ ಬೃಹತ್-ತಾರತಮ್ಯವನು ಅರಿತು ಪಠಿಸುವ,
ಸೂರಿಗಳಿಗೆ ಅನುದಿನದಿ ಪುರುಷ-ಅರ್ಥಗಳ ಪೂರೈಸಿ,
ಕಾರುಣಿಕ ಮರುತ-ಅಂತರ-ಆತ್ಮಕ ಮಾ-ರಮಣ ಜಗನ್ನಾಥ ವಿಠಲ,
ತೋರಿ ಕೊಂಬನು ಹೃತ್-ಕಮಲದೊಳು ಯೋಗ್ಯತೆಯನು ಅರಿತು ॥ ೩೫ ॥

॥ ಇತಿ ಶ್ರೀ ಬೃಹತ್ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ಕಲ್ಪಸಾಧನ ಸಂಧಿ ॥

॥ ಶ್ರೀ ಅಪರೋಕ್ಷ ತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಏಕ–ವಿಂಶತಿ ಮತ ಪ್ರವರ್ತಕ ಕಾಕು ಮಾಯ್ಗಳ ಕುಹಕ ಯುಕ್ತಿ ನಿರಾಕರಿಸಿ,
ಸರ್ವ–ಉತ್ತಮನು ಹರಿಯು ಎಂದು ಸ್ಥಾಪಿಸಿದ,
ಶ್ರೀ–ಕಳತ್ರನ ಸದನ, ದ್ವಿ–ಜ–ಪ ಪಿನಾಕಿ ಸನ್ನುತ ಮಹಿಮ,
ಪರಮ ಕೃಪಾ–ಕಟ–ಆಕ್ಷದಿ ನೋಡು, ಮಧ್ವ–ಆಚಾರ್ಯ ಗುರುವರ್ಯ ॥ ೧ ॥

ವೇಧ ಮೊದಲಾಗಿಪ್ಪ ಅಮಲ ಮೊಕ್ಷ ಅಧಿಕಾರಿಗಳು ಆದ ಜೀವರ,
ಸಾಧನಗಳ, ಅಪರೋಕ್ಷ ನಂತರ ಲಿಂಗ ಭಂಗವನು,
ಸಾಧುಗಳು ಚಿತ್ತಯಿಪದು, ಎನ್ನ ಅಪರಾಧಗಳ ನೋಡದಲೆ,
ಚಕ್ರ ಗದಾ ಧರನು ಪೇಳಿಸಿದ ತೆರದಂದದಲಿ ಪೇಳುವೆನು ॥ ೨ ॥

ತೃಣ–ಕೃಮಿ–ದ್ವಿಜ–ಪಶು–ನರ್ ಉತ್ತಮ–"ಜನ ಪ"–"ನರ ಗಂಧರ್ವ" ಗಣರು,
ಇವರು ಎನಿಪರು ಅಂಶ ವಿಹೀನ ಕರ್ಮ ಸು–ಯೋಗಿಗಳು ಯೆಂದು,
ತನು ಪ್ರತೀಕದಿ ಬಿಂಬನ ಉಪಾಸನವ ಗೈಯುತ, ಇಂದ್ರಿಯ–ಜ ಕರ್ಮ,
ಅನವರತ ಹರಿಗೆ ಅರ್ಪಿಸುತ ನಿರ್–ಮಮರು ಯೆನಿಸುವರು ॥ ೩ ॥

ಏಳು ವಿಧ ಜೀವ ಗಣ ಬಹಳ, ಸುರಾಳಿ ಸಂಖ್ಯಾ ನೇಮ ವುಳ್ಳದು,
ತಾಳಿ ನರ ದೇಹವನು ಬ್ರಾಹ್ಮಣರ ಕುಲದೊಳು ಉದ್ಭವಿಸಿ,
ಸ್ಥೂಲ ಕರ್ಮವ ತೊರೆದು, ಗುರುಗಳು ಪೇಳಿದ ಅರ್ಥವ ತಿಳಿದು,
ತತ್–ತತ್–ಕಾಲ ಧರ್ಮ ಸಮರ್ಪಿಸುವ ಅವರು ಕರ್ಮ ಯೋಗಿಗಳು ॥ ೪ ॥

ಹೀನ ಕರ್ಮಗಳಿಂದ ಬಹು ವಿಧ ಯೋನಿಯಲಿ ಸಂಚರಿಸಿ, ಪ್ರಾಂತಕೆ,
ಮಾನುಷತ್ವವನು ಐದಿ, ಸರ್ವ–ಉತ್ತಮನು ಹರಿ ಯೆಂಬ,
ಜ್ಞಾನ ಭಕ್ತಿಗಳಿಂದ ವೇದ ಉಕ್ತ ಅನುಸಾರ ಸಹಸ್ರ ಜನ್ಮ
ಅನ್ಯೂನ ಕರ್ಮವ ಮಾಡಿ, ಹರಿಗೆ ಅರ್ಪಿಸಿದ ನಂತರದಿ– ॥ ೫ ॥

ಹತ್ತು ಜನ್ಮಗಳಲ್ಲಿ ಹರಿ ಸರ್ವ-ಉತ್ತಮನು, ಸುರ-ಅಸುರ ಗಣ ಅರ್ಚಿತ,
ಚಿತ್ರ ಕರ್ಮ, ವಿಶೋಕ, ಅನಂತ-ಅನಂತ ರೂಪ ಆತ್ಮ,
ಸತ್ಯ ಸತ್-ಸಂಕಲ್ಪ, ಜಗದ ಉತ್ಪತ್ತಿ ಸ್ಥಿತಿಲಯ ಕಾರಣ,
ಜರಾ-ಮೃತ್ಯು ವರ್ಜಿತನು ಎಂದು ಉಪಾಸನೆ ಗೈದ ತರುವಾಯ ॥ ೬ ॥

ಮೂರು ಜನ್ಮಗಳಲ್ಲಿ ದೇಹ-ಆಗಾರ-ಪಶು-ಧನ-ಪತ್ನಿ-ಮಿತ್ರ-
ಕುಮಾರ-ಮಾತಾ-ಪಿತೃಗಳಲ್ಲಿ ಇಹ ಸ್ನೇಹಗಿಂತ ಅಧಿಕ,
ಮಾ-ರಮಣನಲಿ ಬಿಡದೆ ಮಾಡುವ ಸೂರಿಗಳು, ಈ ಉಕ್ತ ಜನ್ಮವ ಮೀರಿ,
ಪರಮ-ಆತ್ಮನ ಸ್ವ-ದೇಹದಿ ನೋಡಿ ಸುಖಿಸುವರು ॥ ೭ ॥

ದೇವ ಗಾಯಕ-ಅಜಾನ-ಚಿರ ಪಿತೃ ದೇವರು ಎಲ್ಲರು,
ಜ್ಞಾನ ಯೋಗಿಗಳು ಆವ ಕಾಲಕು, ಪುಷ್ಕರ-ಶನೈಶ್ಚರ-ಉಷಾ-ಸ್ವಾಹಾ ದೇವಿ-
ಬುಧ-ಸನಕ ಆದಿಗಳು-ಮೇಘ ಆವಳಿ ಪರ್ಜನ್ಯ ಸಾಂಶರು,
ಈ ಉಭಯ ಗಣದೊಳಗೆ ಇವರು ವಿಜ್ಞಾನ ಯೋಗಿಗಳು ॥ ೮ ॥

ಭರತ ಖಂಡದಿ ನೂರು ಜನ್ಮವ ಧರಿಸಿ, ನಿಷ್-ಕಾಮಕ ಸು-ಕರ್ಮ ಆಚರಿಸಿದ ಅನಂತರದಿ,
ದಶ ಸಹಸ್ರ ಜನ್ಮದಲಿ ಉರುತರ ಜ್ಞಾನವನು,
"ಮೂರು ಐದು ಎರಡು ದಶ" ದೇಹದಲಿ ಭಕ್ತಿಯ
ನಿರವಧಿಕನಲಿ ಮಾಡಿ ಕಾಂಬರು ಬಿಂಬ ರೂಪವನು ॥ ೯ ॥

ಸಾಧನಾತ್-ಪೂರ್ವದಲಿ ಇವರಿಗೆ ಅನಾದಿ ಕಾಲ ಅಪರೋಕ್ಷ ವಿಲ್ಲ,
ನಿಷೇಧ ಕರ್ಮಗಳು ಇಲ್ಲ, ನರಕ ಪ್ರಾಪ್ತಿ ಮೊದಲು ಇಲ್ಲ,
ವೇದ ಶಾಸ್ತ್ರಗಳಲ್ಲಿ ಇಪ್ಪ ವಿರೋಧ ವಾಕ್ಯವ ಪರಿಹರಿಸಿ,
ಮಧು-ಸೂದನನೆ ಸರ್ವ-ಉತ್ತಮ-ಉತ್ತಮನು ಎಂದು ತುತಿಸುವರು ॥ ೧೦ ॥

ಸತ್ಯ ಲೋಕ ಅಧಿಪನ ವಿಡಿದು ಶತಸ್ಥ ದೇವ ಗಣ ಅಂತ ಎಲ್ಲರು,
ಭಕ್ತಿ ಯೋಗಿಗಳು ಎಂದು ಕರೆಸುವರು ಆವ ಕಾಲದಲಿ,
ಭಕ್ತಿ ಯೋಗ್ಯರ ಮಧ್ಯದಲಿ ಸದ್-ಭಕ್ತಿ ವಿಜ್ಞಾನ ಆದಿ ಗುಣದಿಂದ ಉತ್ತಮ,
ಉತ್ತಮ ಬ್ರಹ್ಮ ವಾಯೂ ವಾಣಿ ವಾಗ್ದೇವಿ ॥ ೧೧ ॥

ಋಜು ಗಣಕೆ ಭಕ್ತಿ ಆದಿ ಗುಣ ಸಾಹಜವು ಎನಿಸುವವು,
ಕ್ರಮದಿ ವೃದ್ಧಿ ಅಬ್ಜ-ಜ ಪದವಿ ಪರ್ಯಂತ ಬಿಂಬ ಉಪಾಸನವು ಅಧಿಕ,
ವೃಜಿನ ವರ್ಜಿತ ಎಲ್ಲರೊಳು, ತ್ರಿಗುಣ-ಜ ವಿಕಾರಗಳು ಇಲ್ಲವು ಎಂದಿಗು,
ದ್ವಿ-ಜ ಫಣಿ-ಪ ಮೃಡ ಶಕ್ರ ಮೊದಲಾದ ಅವರೊಳು ಇರುತಿಹವು ॥ ೧೨ ॥

ಸಾಧನಾತ್-ಪೂರ್ವದಲಿ ಈ ಋಜ್ವಾದಿ ತಾತ್ವಿಕರು ಎನಿಪ ಸುರ ಗಣ,
ಅನಾದಿ ಸಾಮಾನ್ಯ ಅಪರೋಕ್ಷಿಗಳು ಎಂದು ಕರೆಸುವರು,
ಸಾಧನ-ಉತ್ತರ ಸ್ವಸ್ವ ಬಿಂಬ ಉಪಾಧಿ ರಹಿತ ಆದಿತ್ಯನ-ಅಂದದಿ,
ಸಾದರದಿ ನೋಡುವರು ಅಧಿಕಾರ ಅನುಸಾರದಲಿ ॥ ೧೩ ॥

ಭಿನ್ನ ಭಕ್ತರು ಎನಿಸುತಿಹರು ಸುಪರ್ಣ ಶೇಷ ಆದಿ ಅಮರರು ಎಲ್ಲ,
ಅಚ್ಛಿನ್ನ ಭಕ್ತರು ನಾಲ್ವರು ಎನಿಪರು ಭಾರತೀ-ಪ್ರಾಣ-ಸೊನ್ನ ಒಡಲ-ವಾಗ್ ದೇವಿಯರು,
ಪಣೆಗಣ್ಣ ಮೊದಲಾದ ಅವರೊಳಗೆ ತತ್-ತನ್-ನಿಯಾಮಕರು ಆಗಿ
ವ್ಯಾಪಾರವನು ಮಾಡುವರು ॥ ೧೪ ॥

ಹೀನ ಸತ್-ಕರ್ಮಗಳು ಎರಡು ಪವಮಾನ ದೇವನು ಮಾಳ್ಪನು,
ಇದಕೆ ಅನುಮಾನವು ಇಲ್ಲ ಎಂದು ಎನುತ ದೃಢ ಭಕ್ತಿಯಲಿ ಭಜಿಪರ್ಗೆ,
ಪ್ರಾಣ-ಪತಿ ಸಂಪ್ರೀತನು ಆಗಿ ಕುಯೋನಿಗಳ ಕೊಡ,
ಎಲ್ಲ ಕರ್ಮಗಳು ಆನೆ ಮಾಡುವೆನು ಎಂಬ ಮನುಜರ ನರಕಕೆ ಐದಿಸುವ ॥ ೧೫ ॥

ದೇವ-ಋಷಿ-ಪಿತೃ-ಪ-ನರರು ಎನಿಸುವ ಐವರೊಳು ನೆಲೆಸಿ ಇದ್ದು,
ಅವರ ಸ್ವಭಾವ ಕರ್ಮವ ಮಾಡಿ ಮಾಡಿಪ ಒಂದು ರೂಪದಲಿ,
ಭಾವಿ ಬ್ರಹ್ಮನು ಕೂರ್ಮ ರೂಪದಿ, ಈ ವಿರಿಂಚಿ-ಅಂಡವನು ಬೆನ್ನಿಲಿ ತಾ ವಹಿಸಿ,
ಲೋಕಗಳ ಪೊರೆವನು ದ್ವಿತಿಯ ರೂಪದಲಿ ॥ ೧೬ ॥

ಗುಪ್ತನು ಆಗಿದ್ದು ಅನಿಲ ದೇವ, ದ್ವಿ-ಸಪ್ತ-ಲೋಕದ ಜೀವರ ಒಳಗೆ,
ತ್ರಿ-ಸಪ್ತ-ಸಾವಿರದ-ಆರು-ನೂರು ಶ್ವಾಸ ಜಪಗಳನು,
ಸುಪ್ತಿ-ಸ್ವಪ್ನದಿ-ಜಾಗ್ರತಿಗಳಲಿ, ಆಪ್ತನ-ಅಂದದಿ ಮಾಡಿ ಮಾಡಿಸಿ,
ಕ್ಲುಪ್ತ ಭೋಗಗಳ ಈವ ಪ್ರಾಂತಕೆ, ತೃತೀಯ ರೂಪದಲಿ ॥ ೧೭ ॥

ಶುದ್ಧ ಸತ್ವ-ಆತ್ಮಕ ಶರೀರದೊಳು ಇದ್ದ ಕಾಲಕು, ಲಿಂಗದೇಹವು ಬದ್ಧ ವಾಗದು,
ದಗ್ಧ ಪಟದ-ಉಪಾದಿ ಇರುತಿಹುದು,
ಸಿದ್ಧ ಸಾಧನ ಸರ್ವರೊಳಗೆ, ಅನವದ್ಯನು ಎನಿಸುವ,
ಗರುಡ-ಶೇಷ-ಕಪರ್ದಿ ಮೊದಲಾದ ಅಮರರು ಎಲ್ಲರು ದಾಸರು ಎನಿಸುವರು ॥ ೧೮ ॥

ಗಣದೊಳಗೆ ತಾನು ಇದ್ದು ಋಜುವೆಂದು ಎನಿಸಿ ಕೊಂಬನು,
ಕಲ್ಪ ಶತ ಸಾಧನವ ಗೈದ ಅನಂತರದಿ ತಾ ಕಲ್ಕಿ ಯೆನಿಸುವನು,
ದ್ವಿ-ನವ-ಅಶೀತಿಯ ಪ್ರಾಂತ ಭಾಗದಿ, ಅನಿಲ ಹನುಮದ್-ಭೀಮ ರೂಪದಿ
ದನುಜರ ಎಲ್ಲರ ಸದೆದು, ಮಧ್ವ-ಅಚಾರ್ಯರು ಎನಿಸಿದನು ॥ ೧೯ ॥

ವಿಶ್ವ ವ್ಯಾಪಕ ಹರಿಗೆ, ತಾ ಸಾದೃಶ್ಯ ರೂಪವ ಧರಿಸಿ,
ಬ್ರಹ್ಮ ಸರಸ್ವತೀ ಭಾರತಿಗಳಿಂದ ಒಡಗೂಡಿ ಪವಮಾನ,
ಶಾಶ್ವತ ಸು-ಭಕ್ತಿಯಲಿ, ಸು-ಜ್ಞಾನ ಸ್ವರೂಪನ ರೂಪ ಗುಣಗಳ,
ಅನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗೆ ಇದ್ದು ॥ ೨೦ ॥

ಖೇಟ-ಕುಕ್ಕುಟ-ಜಲಟವು ಎಂಬ ತ್ರಿ-ಕೋಟಿ ರೂಪವ ಧರಿಸಿ,
ಸತತ ನಿಶಾಟರನು ಸಂಹರಿಸಿ ಸಲಹುವ ಸರ್ವ ಸತ್-ಜನರ,
ಕೈಟಭ-ಅರಿಯ ಪುರದ, ಪ್ರಥಮ ಕವಾಟವು ಎನಿಸುವ
ಗರುಡ ಶೇಷ ಲಲಾಟ-ಲೋಚನ ಮುಖ್ಯ ಸುರರಿಗೆ ಆವಕಾಲದಲಿ ॥ ೨೧ ॥

ಈ ಋಜುಗಳೊಳಗೆ ಒಬ್ಬ ಸಾಧನ ನೂರು ಕಲ್ಪದಿ ಮಾಡಿ ಕರೆಸುವ,
ಚಾರುತರ ಮಂಗಳ ಸುನಾಮದಿ ಕಲ್ಪ ಕಲ್ಪದಲಿ,
ಸೂರಿಗಳು ಸಂಸ್ತುತಿಸಿ ವಂದಿಸೆ, ಘೋರದುರಿತಗಳು ಅಳಿದು ಪೋಪುವು,
ಮಾ-ರಮಣ ಸಂ-ಪ್ರೀತನು ಆಗುವ ಸರ್ವ ಕಾಲದಲಿ ॥ ೨೨ ॥

ಪಾಹಿ ಕಲ್ಕಿ-ಸುತೇಜ-ದಾಸನೆ, ಪಾಹಿ ಧರ್ಮ-ಅಧರ್ಮ ಖಂಡನೆ,
ಪಾಹಿ ವರ್ಚಸ್ವೀ-ಋಷಣ, ನಮೋ ಸಾಧು-ಮಹೀಪತಿಯೆ,
ಪಾಹಿ ಸದ್ಧರ್ಮಜ್ಞ-ಧರ್ಮಜ, ಪಾಹಿ ಸಂಪೂರ್ಣ-ಶುಚಿ-ವೈಕೃತ,
ಪಾಹಿ ಅಂಜನ-ಸರ್ಷಪನೆ-ಖರ್ಪಟಃ-ಶ್ರದ್ಧಾಹ್ವ ॥ ೨೩ ॥

ಪಾಹಿ ಸಂಧ್ಯಾತ-ವಿಜ್ಞಾನನೆ, ಪಾಹಿ ಮಹ ವಿಜ್ಞಾನ-ಕೀರ್ತನ,
ಪಾಹಿ ಸಂಕೀರ್ಣಾಖ್ಯ-ಕತ್ಥನ-ಮಹಾಬುದ್ಧಿ-ಜಯಾ,
ಪಾಹಿ ಮಾಹತ್ತರ-ಸುವೀರ್ಯನೆ, ಪಾಹಿ ಮಾಂ ಮೇಧಾವಿ, ಜಯ ಅಜಯ,
ಪಾಹಿ ಮಾಂ ರಂತಿಮ್ನ-ಮನು, ಮಾಂ ಪಾಹಿ ಮಾಂ ಪಾಹಿ ॥ ೨೪ ॥

ಪಾಹಿ ಮೋದ-ಪ್ರಮೋದ-ಸಂತಸ, ಪಾಹಿ ಆನಂದ-ಸಂತುಷ್ಟನೆ,
ಪಾಹಿ ಮಾಂ ಚಾರ್ವ ಅಂಗ-ಚಾರು ಸುಬಾಹು-ಚಾರು ಪದ,
ಪಾಹಿ ಪಾಹಿ ಸುಲೋಚನನೆ, ಮಾಂ ಪಾಹಿ ಸಾರಸ್ವತ-ಸುವೀರನೆ,
ಪಾಹಿ ಪ್ರಾಜ್ಞ-ಕಪಿ- ಅಲಂಪಟ, ಪಾಹಿ ಸರ್ವಜ್ಞ ॥ ೨೫ ॥

ಪಾಹಿ ಮಾಂ ಸರ್ವಜಿನ್-ಮಿತ್ರನೆ, ಪಾಹಿ ಪಾಪ ವಿನಾಶಕನೆ,
ಮಾಂ ಪಾಹಿ ಧರ್ಮವಿನೇತ-ಶಾರದ ಓಜ-ಸುತಪಸ್ವೀ,
ಪಾಹಿ ಮಾಂ ತೇಜಸ್ವಿ, ನಮೋ ಮಾಂ ಪಾಹಿ ದಾನ-ಸುಶೀಲ,
ನಮೋ ಮಾಂ ಪಾಹಿ ಯಜ್ಞ-ಸುಕರ್ತ-ಯಜ್ವೀ-ಯಾಗ ವರ್ತಕನೆ ॥ ೨೬ ॥

ಪಾಹಿ ಪ್ರಾಣ–ತ್ರಾಣ–ಅಮಖುಷಿ, ಪಾಹಿ ಮಾಂ ಉಪದೇಷ್ಟ–ತಾರಕ,
ಪಾಹಿ ಕಾಲ–ಕ್ರೀಡನ–ಸುಕರ್ತಾ–ಸುಕಾಲಜ್ಞ,
ಪಾಹಿ ಕಾಲ ಸುಸೂಚಕನೆ, ಮಾಂ ಪಾಹಿ ಕಲಿ ಸಂಹರ್ತ–ಕಲಿ,
ಮಾಂ ಪಾಹಿ ಕಾಲಿ–ಶಾಮರೇತ–ಸದಾರತ–ಸುಬಲನೆ ॥ ೨೭ ॥

ಪಾಹಿ ಪಾಹಿ ಸಹೋ–ಸದಾಕಪಿ, ಪಾಹಿ ಗಮ್ಯ–ಜ್ಞಾನ–ದಶಕುಲ ।
ಪಾಹಿ ಮಾಂ ಶ್ರೋತವ್ಯ ನಮೋ, ಸಂಕೀರ್ತಿತವ್ಯ ನಮೋ,
ಪಾಹಿ ಮಾಂ ಮಂತವ್ಯ–ಕವ್ಯನೆ, ಪಾಹಿ ದ್ರಷ್ಟವ್ಯನೆ–ಸರವ್ಯನೆ,
ಪಾಹಿ ಗಂತವ್ಯ, ನಮೋ ಕ್ರವ್ಯನೆ, ಪಾಹಿ ಸ್ಮರ್ತವ್ಯ ॥ ೨೮ ॥

ಪಾಹಿ ಸೇವ್ಯ–ಸುಭವ್ಯ ನಮೋ, ಮಾಂ ಪಾಹಿ ಸ್ವರ್ಗವ್ಯ, ನಮೋ ಭಾವ್ಯನೆ,
ಪಾಹಿ ಮಾಂ ಜ್ಞಾತವ್ಯ ನಮೋ, ವಕ್ತವ್ಯ–ಗವ್ಯ ನಮೋ,
ಪಾಹಿ ಮಾಂ ಲಾತವ್ಯ–ವಾಯುವೆ, ಪಾಹಿ ಬ್ರಹ್ಮ ಬ್ರಾಹ್ಮಣ ಪ್ರಿಯ,
ಪಾಹಿ ಪಾಹಿ ಸರಸ್ವತೀ–ಪತೇ ಜಗದ್–ಗುರುವರ್ಯ ॥ ೨೯ ॥

ವಾಮನ ಪುರಾಣದಲಿ ಪೇಳಿದ ಈ ಮಹಾತ್ಮರ ಪರಮ ಮಂಗಳ ನಾಮಗಳ,
ಸಂ–ಪ್ರೀತಿ ಪೂರ್ವಕ ನಿತ್ಯ ಸ್ಮರಿಸುವವರಾ,
ಶ್ರೀ–ಮನೋರಮ ಅವರು ಬೇಡಿದ ಕಾಮಿತ ಅರ್ಥಗಳ ಇತ್ತು,
ತನ್ನ ತ್ರಿ–ಧಾಮದೊಳಗೆ ಅನುದಿನದಲಿ ಇಟ್ಟು ಆನಂದ ಬಡಿಸುವನು ॥ ೩೦ ॥

ಈ ಸಮೀರಗೆ ನೂರು ಜನ್ಮ ಮಹಾ ಸುಖ ಪ್ರಾರಬ್ಧ ಭೋಗ,
ಪ್ರಯಾಸವು ಇಲ್ಲದೆ ಐದಿದನು ಲೋಕ ಆಧಿಪತ್ಯವನು,
ಭೂ–ಸುರನ ಒಪ್ಪಿಡಿ ಅವಲಿಗೆ ವಿಶೇಷ ಸೌಖ್ಯವನು ಇತ್ತ ದಾತನ,
ದಾಸವರ್ಯನು ಲೋಕಪತಿ ಯೆನಿಸುವದು ಅಚ್ಚರವೆ ॥ ೩೧ ॥

ದ್ವಿ–ಶತ ಕಲ್ಪಗಳಲ್ಲಿ ಬಿಡದೆ ಈ ಪೆಸರಿನಿಂದಲಿ ಕರೆಸಿದನು,
ತನ್ನ ಒಶಗ ಅಮರರೊಳು ಇದ್ದು ಮಾಡುವನು ಅವರ ಸಾಧನವ,
ಅಸದ್–ಉಪಾಸನೆ ಗೈವ ಕಲಿ–ಆದಿ–ಅಸುರ–ಪರ ಸಂಹರಿಸಿ,
ತಾ ಪೊಂಬ–ಅಸಿರ ಪದ ವೈದಿದನು ಗುರು ಪವಮಾನ ಸತಿಯೊಡನೆ ॥ ೩೨ ॥

ಅನಿಮಿಷರ ನಾಮದಲಿ ಕರೆಸುವ ಅನಿಲದೇವನು,
ಒಂದು ಕಲ್ಪಕೆ ವನ–ಜ ಸಂಭವನು ಎನಿಸಿ ಎಂಭತ್ತು ಏಳು–ವರೆ ವರುಷ,
ಗುಣ–ತ್ರಯ ವರ್ಜಿತನ ಮಂಗಳ ಗುಣ ಕ್ರಿಯ ಸು–ರೂಪಂಗಳ,
ಉಪಾಸನವು ಅವ್ಯಕ್ತ ಆದಿ ಪೃಥ್ವಿ ಅಂತರದಿ ಇರುತ ಇಹುದು ॥ ೩೩ ॥

ಮಹಿತ ಋಜು ಗಣಕೆ ಒಂದೆ ಪರಮ-ಉತ್ಸಹ ವಿವರ್ಜಿತವು ಎಂಬ ದೋಷವು,
ವಿಹಿತವೇ ಸರಿ, ಇದನು ಪೇಳ್ದಿರೆ ಮುಕ್ತ ಬ್ರಹ್ಮರಿಗೆ ಬಹುದು ಸಾಮ್ಯವು,
ಜ್ಞಾನ ಭಕುತಿಯು ದ್ರುಹಿಣ ಪದ ಪರಿಯಂತ ವೃದ್ಧಿಯು,
ಬಹಿರ್-ಉಪಾಸನೆ ಉಂಟು, ಅನಂತರ ಬಿಂಬ ದರ್ಶನವು ॥ ೩೪ ॥

ಜ್ಞಾನ ರಹಿತ-ಭಯತ್ವ ಪೇಳ್ವ ಪುರಾಣ, ದೈತ್ಯರ ಮೋಹಕವು,
ಚತುರ-ಆನನಗೆ ಕೊಡುವದೆ ಮೋಹ-ಅಜ್ಞಾನ-ಭಯ-ಶೋಕ,
ಭಾನು-ಮಂಡಲ ಚಲಿಸಿದಂದದಿ ಕಾಣುವುದು ದೃಗ್-ದೋಷದಿಂದಲಿ,
ಶ್ರೀನಿವಾಸನ ಪ್ರೀತಿಗೋಸುಗ ತೋರ್ದನು ಅಲ್ಲದಲೆ ॥ ೩೫ ॥

ಕಮಲ-ಸಂಭವ ಸರ್ವರೊಳಗೆ ಉತ್ತಮನು ಎನಿಸುವನು ಎಲ್ಲ ಕಾಲದಿ,
ವಿಮಲ ಭಕ್ತಿ-ಜ್ಞಾನ-ವೈರಾಗ್ಯ ಆದಿ ಗುಣದಿಂದ,
ಸಮ-ಅಭ್ಯಧಿಕ ವಿವರ್ಜಿತನ ಗುಣ, ರಮೆಯ ಮುಖದಿಂದ ಅರಿತು ನಿತ್ಯದಿ,
ದ್ಯು-ಮಣಿ ಕೋಟಿಗಳ ಅಂತೆ ಕಾಂಬನು ಬಿಂಬ ರೂಪವನು ॥ ೩೬ ॥

ಜ್ಞಾನ-ಭಕ್ತಿ ಆದಿ ಅಖಿಳ ಗುಣ, ಚತುರ-ಆನನ ಒಳಗೆ ಇಪ್ಪಂತೆ,
ಮುಖ್ಯ ಪ್ರಾಣನಲಿ ಚಿಂತಿಪುದು, ಯತ್-ಕಿಂಚಿತ್-ಕೊರತೆಯಾಗಿ,
ನ್ಯೂನ ಋಜು ಗಣ ಜೀವರಲ್ಲಿ, ಕ್ರಮೇಣ ವೃದ್ಧಿ ಜ್ಞಾನ-ಭಕ್ತಿ,
ಸಮಾನ ಭಾರತಿ ವಾಣಿಗಳಲಿ, ಪದ ಪ್ರಯುಕ್ತ ಅಧಿಕ ॥ ೩೭ ॥

ಸೌರಿ ಸೂರ್ಯನ ತೆರದಿ, ಬ್ರಹ್ಮ ಸಮೀರ ಗಾಯತ್ರೀ ಗಿರಿಗಳೊಳು,
ತೋರುವುದು ಅಸ್ಪಷ್ಟ ರೂಪದಿ, ಮುಕ್ತಿ ಪರಿಯಂತ,
ವಾರಿಜ-ಆಸನ ವಾಯು ವಾಣೀ ಭಾರತಿಗಳಿಗೆ, ಮಹಾ ಪ್ರಳಯದಿ ಬಾರದು
ಅಜ್ಞಾನ ಆದಿ ದೋಷವು, ಹರಿ ಕೃಪಾ ಬಲದಿ ॥ ೩೮ ॥

ನೂರು ವರುಷ ಅನಂತರದಲಿ ಸರೋರುಹ-ಆಸನ ತನ್ನ ಕಲ್ಪದಲಿ
ಆರು ಮುಕ್ತಿಯನು ಐದುವರೊ ಅವರ-ಅವರ ಕರೆದೊಯ್ದು,
ಶೌರಿ ಪುರುದೊಳಗೆ ಇಪ್ಪ ನದಿಯಲಿ ಕಾರುಣಿಕ ಸುಸ್ನಾನ ನಿಜ ಪರಿವಾರ ಸಹಿತದಿ ಮಾಡಿ,
ಹರಿ ಉದರ ಪ್ರವೇಶಿಸುವ ॥ ೩೯ ॥

ವಾಸುದೇವನ ಉದರದಲಿ ಪ್ರವೇಷಗೈದ ಅನಂತರದಿ,
ನಿರ್ದೋಷ ಮುಕ್ತರು ಉದರದಿಂ ಪೊರಮಟ್ಟು ಹರುಷದಲಿ,
ಮೇಶನಿಂದ ಆಜ್ಞವ ಪಡೆದು, ಅನಂತ ಆಸನ-ಸೀತದ್ವೀಪ-ಮೋಕ್ಷದಿ ವಾಸವಾಗಿ,
ವಿಮುಕ್ತ ದು:ಖರು, ಸಂಚರಿಸುತ ಇಹರು ॥ ೪೦ ॥

ಸತ್ವ ಸತ್ವ ಮಹಾ ಸು-ಸೂಕ್ಷಮು, ಸತ್ವ ಸತ್ವ ಆತ್ಮಕ ಕಳೇವರ,
ಸತ್ಯ ಲೋಕ ಅಧಿಪನು ಎನಿಪಗೆ ಅತ್ಯಲ್ಪವು ಎರಡು ಗುಣ,
ಮುಕ್ತ ಭೋಗ್ಯವು ಇದಲ್ಲ, ಅಜ-ಅಂಡ-ಉತ್ಪತ್ತಿ ಕಾರಣವು ಅಲ್ಲ,
ಹರಿ ಪ್ರೀತ್ಯರ್ಥವಾಗೀ ಜಗದ ವ್ಯಾಪಾರಗಳ ಮಾಡುವನು ॥ ೪೧ ॥

ಪಾದ ನ್ಯೂನ ಶತ-ಅಬ್ದ ಪರಿಯಂತ ಓದಿ, ಉಗ್ರತಪ ಆಹ್ವಯದಿ ಲವಣ ಉದಧಿಯೊಳಗೆ
ಕಲ್ಪ-ದಶ ತಪವಿದ್ದ ಅನಂತರದಿ,
ಸಾಧಿಸಿದ ಮಹದೇವ ಪದವ, ಆರು-ಐದು-ನವ ಕಲ್ಪ ಅವಸಾನಕೆ,
ಐದುವನು ಶೇಷನ ಪದವ ಪಾರ್ವತಿ ಸಹಿತನು ಆಗಿ ॥ ೪೨ ॥

ಇಂದ್ರ ಮನು-ದಶ ಕಲ್ಪಗಳಲಿ, ಸುನಂದ ನಾಮದಿ ಶ್ರವಣ ಗೈದು,
ಮುಕುಂದನ ಅಪರೋಕ್ಷಾರ್ಥ ನಾಲ್ಕು ಸುಕಲ್ಪ ತಪವು ಇದ್ದು,
ನೊಂದು ಪೊಗೆಯೊಳು ಕೋಟಿ ವರುಷ, ಪುರಂದರನು ಅದನು ಉಂಡ ಅನಂತರ,
ಪೊಂದಿದನು ನಿಜ ಲೋಕ ಸುರಪತಿ, ಕಾಮನು ಇದರಂತೆ ॥ ೪೩ ॥

ಕರೆಸುವರು ಪೂರ್ವದಲಿ, ಚಂದ್ರ-ಅರ್ಕರು, ಅತಿ ಶಾಂತ-ಸುರೂಪ ನಾಮದಿ,
ಎರಡು-ಎರಡು ಮನು ಕಲ್ಪ ಶ್ರವಣ ಗೈದು,
ಮನು ಕಲ್ಪ ವರ ತಪೋ ಬಲದಿಂದ, ಅರ್ವಾಕ್ ಶಿರಗಳು ಆಗಿ "ಈರು ಐದು ಸಾವಿರ" ವರುಷ
ದು:ಖವನು ಈಗಿ ಕಾಂಬರು ಬಿಂಬ ರೂಪವನು ॥ ೪೪ ॥

ಸಾಧನಗಳ ಅಪರೋಕ್ಷ ಅನಂತರ ಐದುವರು ಮೋಕ್ಷವನು,
ಶಿವ ಶಕ್ರ ಆದಿ ದಿವಿಜರು ಉಕ್ತ ಕ್ರಮದಿಂ ಕಲ್ಪ ಸಂಖ್ಯೆಯಲಿ,
ಐದಲೆಗೆ ಐವತ್ತು, ಉಪೇಂದ್ರ ಸಹ-ಉದರನಿಗೆ ಇಪ್ಪತ್ತು,
ದ್ವಿ-ನವ ತ್ವಗ್-ಅಧಿಪತಿ ಪ್ರಾಣನಿಗೆ, ಗುರು ಮನುಗಳಿಗೆ ಷೋಡಶವು ॥ ೪೫ ॥

ಪ್ರವಹ ಮರುತಗೆ ಹನ್ನೆರಡು, ಸೈಂಧವ-ದಿವಾಕರ-ಧರ್ಮರಿಗೆ ದಶ,
ನವ ಸು-ಕಲ್ಪವು ಮಿತ್ರರಿಗೆ, ಶೇಷ ಶತ ಜನರಿಗೆ ಎಂಟು,
ಕವಿ ಸನಕ ಸು-ಸನಂದನ ಸನತ್ಕುವರ ಮುನಿಗಳಿಗೆ ಏಳು,
ವರುಣನ ಯುವತಿ ಪರ್ಜನ್ಯ ಆದಿ ಪುಷ್ಕರಗೆ ಆರು ಕಲ್ಪದಲಿ ॥ ೪೬ ॥

ಐದು ಕರ್ಮ-ಜ ಸುರರಿಗೆ, ಆಜಾನ ಆದಿಗಳಿಗೆ ಎರಡು-ಎರಡು ಕಲ್ಪ,
ಅರ್ಧ ಅಧಿಕ ತ್ರಯ ಗೋಪಿಕಾ ಸ್ತ್ರೀಯರಿಗೆ, ಪಿತೃ ತ್ರಯವು,
ಈ ದಿವೌಕಸ ಮನುಜ ಗಾಯಕರು ಐದುವರು ಎರಡು ಒಂದು ಕಲ್ಪ,
ನರ ಅಧಿಪರಿಗೆ ಅರೆ ಕಲ್ಪದೊಳಗೆ ಅಪರೋಕ್ಷವು ಇರುತ ಇಹುದು ॥ ೪೭ ॥

ದೀಪಗಳ ಅನುಸರಿಸಿ ದೀಪ್ತಿಯು ವ್ಯಾಪಿಸಿ ಮಹಾ-ತಿಮಿರ ಕಳೆದು,
ಪರ ಉಪಕಾರವ ಮಾಳ್ಪ ತೆರದಂದದಲಿ ಪರಮ-ಆತ್ಮ,
ಆ ಪಂಯೋಜ-ಆಸನನ ಒಳಗೆ ಇದ್ದು ಸ್ವರೂಪ ಶಕ್ತಿಯ ವ್ಯಕ್ತಿಗೈಸುತ,
ತಾ ಪೊಳೆವನು ಅವರಂತೆ ಚೇಷ್ಟೆಯ ಮಾಡಿ ಮಾಡಿಸುವ ॥ ೪೮ ॥

ಸ್ವ-ಉದರ-ಸ್ಥಿತ ಪ್ರಾಣ ರುದ್ರ ಇಂದ್ರ ಆದಿ ಸುರರಿಗೆ ದೇಹಗಳ ಕೊಟ್ಟು,
ಆದರದಿ ಅವರ-ಅವರ ಸೇವೆಯ ಕೊಂಬನು ಅನವರತ,
ಮೋದ-ಬೋಧ-ದಯ ಅಬ್ಧಿ, ತನ್ನವರ ಆಧಿ ರೋಗವ ಕಳೆದು,
ಮಹದ್-ಅಪರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ॥ ೪೯ ॥

ಪ್ರತಿ ಪ್ರತೀ ಕಲ್ಪದಲಿ, ಸೃಷ್ಟಿ-ಸ್ಥಿತಿ-ಲಯವ ಮಾಡುತಲೆ ಮೋದಿಪ,
ಚತುರ ಮುಖ ಪವಮಾನರ ಅನ್ನವ ಮಾಡಿ ಭುಂಜಿಸುವ,
ಘೃತವೆ ಮೃತ್ಯುಂಜಯನು ಎನಿಪ, ದೇವತೆಗಳು ಎಲ್ಲ ಉಪಸೇಚನರು,
ಶ್ರೀ-ಪತಿಗೆ ಮೂರ್-ಜಗವು ಎಲ್ಲ ಓದನ ಅತಿಥಿ ಯೆನಿಸಿ ಕೊಂಬ ॥ ೫೦ ॥

ಗರ್ಭಿನಿ-ಸ್ತ್ರೀ ಉಂಡ ಭೋಜನ, ಗರ್ಭ-ಗತ ಶಿಶು ಉಂಬ ತೆರದಲಿ,
ನಿರ್-ಭಯನು ತಾನು ಉಂಡು ಉಣಿಸುವನು ಸರ್ವ ಜೀವರಿಗೆ,
ನಿರ್ಬಲ-ಅತಿ ಪರಮ ಅಣು ಜೀವಗೆ, ಅಬ್ಬುವದೇ ಸ್ಥೂಲ ಅನ್ನ ಭೋಜನ,
ಅರ್ಭಕರು ಪೇಳುವರು, ಕೋವಿದರು ಇದನ ಒಡಂಬಡರು ॥ ೫೧ ॥

ಅಪಚಯಗಳು ಇಲ್ಲ, ಉಂಡುದುದರಿಂದ ಉಪಚಯಗಳು ಇಲ್ಲ,
ಅಮರ ಗಣ ದೊಳಗೆ ಉಪಮರು ಎನಿಸುವರು ಇಲ್ಲ, ಜನ್ಮ ಆದಿಗಳು ಮೊದಲೆ ಇಲ್ಲ,
ಅಪರಿಮಿತ ಸನ್ಮಹಿಮ, ಭಕ್ತರ ಅಪುನರ-ಆವರ್ತರನು ಮಾಡುವ,
ಕೃಪಣ-ವತ್ಸಲ ಸ್ವ-ಪದ ಸೌಖ್ಯವನು ಇತ್ತು ಶರಣರಿಗೆ ॥ ೫೨ ॥

ಬಿತ್ತಿ ಬೀಜವು ಭೂಮಿಯೊಳು, ನೀರೆತ್ತಿ ಬೆಳಸಿದ ಬೆಳಸು, ಪ್ರಾಂತಕೆ,
ಕಿತ್ತಿ ಮೆಲುವಂದದಲಿ, ಲಕ್ಷ್ಮೀ-ರಮಣ, ಲೋಕಗಳ-ಮತ್ತೆ ಜೀವರ-
ಕರ್ಮ-ಕಾಲ-ಉತ್ಪತ್ತಿ-ಸ್ಥಿತಿ-ಲಯ ಮಾಡುತಲಿ,
ಸಮವರ್ತಿ ಯೆನಿಸುವ, ಖೇದ ಮೋದಗಳು ಇಲ್ಲ ಅನವರತ ॥ ೫೩ ॥

ಶ್ವಸನ-ರುದ್ರ-ಇಂದ್ರ ಪ್ರಮುಖ ಸುಮನಸರೊಳು ಇದ್ದರು,
ಕ್ಷುತ್-ಪಿಪಾಸಗಳು ಒಶದೊಳು ಇಪ್ಪವು ಸಕಲ ಭೋಗಕೆ ಸಾಧನಗಳು ಆಗಿ,
ಅಸುರ ಪ್ರೇತ ಪಿಶಾಚಿಗಳ ಭಾಧಿಸುತಲಿ ಇಪ್ಪವು,
ದಿನ ದಿನದಿ ಮಾನಿಸರ ಒಳಗೆ ಮೃಗ ಪಕ್ಷಿ ಜೀವರೊಳು ಇದ್ದು ಪೋಗುವವು ॥ ೫೪ ॥

ವಾಸುದೇವಗೆ ಸ್ವಪ್ನ–ಸುಪ್ತಿ–ಪಿಪಾಸ–ಕ್ಷುತ್–ಭಯ–ಶೋಕ–ಮೋಹ–ಆಯಾಸ–ಅಪ ಸ್ಮೃತಿ–
ಮಾತ್ಸರ್ಯ–ಮದ–ಪುಣ್ಯ–ಪಾಪ ಆದಿ ದೋಷ ವರ್ಜಿತನು ಎಂದು,
ಬ್ರಹ್ಮ ಸದಾ–ಶಿವ ಆದಿ ಸಮಸ್ತ ದಿವಿಜರು ಉಪಾಸನೆಯ ಗೈದು
ಎಲ್ಲ ಕಾಲದಿ ಮುಕ್ತರು ಆಗಿಹರು ॥ ೫೫ ॥

ಪರಮ ಸೂಕ್ಷ್ಮ ಕ್ಷಣವು, ಐದು ತ್ರುಟಿ, ಕರೆಸುವದು ಐವತ್ತು ತ್ರುಟಿ ಲವ,
ಎರಡು ಲವವು ನಿಮಿಷ, ನಿಮಿಷಗಳು ಎಂಟು ಮಾತ್ರ,
ಯುಗ ಗುರು, ದಶ ಪ್ರಾಣರು, ಪಳ ಹನ್ನೆರಡು ಬಾಣವು,
ಘಟಿಕ ತ್ರಿಂಶತಿ ಇರಳು–ಹಗಲು, ಅರವತ್ತು ಘಟಿಕಗಳು ಅಹೋರಾತ್ರಿಗಳು ॥ ೫೬ ॥

ಈ ದಿವಾ–ರಾತ್ರಿಗಳು ಎರಡು ಹದಿನೈದು ಪಕ್ಷಗಳು,
ಎರಡು ಮಾಸಗಳು ಆದಪವು, ಮಾಸ ದ್ವಯವೆ ಋತು, ಋತು ತ್ರಯಗಳು ಅಯನ,
ಐದುವದು ಅಯನ ದ್ವಯ ಅಬ್ದ, ಕೃತ ಆದಿ ಯುಗಗಳು,
ದೇವ ಮಾನದಿ ದ್ವಾದಶ ಸಹಸ್ರ ವರುಷಗಳು ಅದನು ಪೇಳುವೆನು ॥ ೫೭ ॥

ಚತುರ ಸಾವಿರದ ಎಂಟು ನೂರಿವು ಕೃತ ಯುಗಕೆ,
ಸಹಸ್ರ ಸಲೆ ಷಟ್ ಶತವು ತ್ರೇತಗೆ, ದ್ವಾಪರಕೆ ದ್ವಿ ಸಹಸ್ರ ನಾನೂರು,
ದಿತಿ–ಜ–ಪತಿ ಕಲಿ ಯುಗಕೆ ಸಾವಿರ ಶತ ದ್ವಯಗಳು ಕೂಡಿ,
ಈ ದೇವತೆಗಳಿಗೆ ಹನ್ನೆರಡು ಸಾವಿರ ವಿಹವು ವರುಷಗಳು ॥ ೫೮ ॥

ಪ್ರಥಮ ಯುಗಕೆ ಏಳು ಅಧಿಕ ಅರೆ ವಿಂಶತಿ ಸುಲಕ್ಷ ಅಷ್ಟ ಉತ್ತರ
ಸುವಿಂ ಶತಿ ಸಹಸ್ರ ಮನುಷ್ಯ ಮಾನ ಅಬ್ದಗಳು,
ಷಣ್ಣವತಿ ಮಿತ ಸಹಸ್ರದ ಲಕ್ಷ ದ್ವಾದಶ ದ್ವಿತಿಯ,
ತೃತಿಯಕೆ ಎಂಟು ಲಕ್ಷದ ಚತುರ ಷಷ್ಠಿ ಸಹಸ್ರ, ಕಲಿಗೆ ಇದರ ಅರ್ಧ ಚಿಂತಿಪುದು ॥ ೫೯ ॥

ಮೂರು ಅಧಿಕ ನಾಲ್ವತ್ತು ಲಕ್ಷದ ಆರು ಮೂರು ಎರಡು ಅಧಿಕ ಸಾವಿರ,
ಈರು ಎರಡು ಯುಗ ವರುಷ ಸಂಖ್ಯೆ ಗೈಯಲು ಇನಿತಿಹುದೊ,
ಸೂರಿ ಪೆಚ್ಚಿಸೆ ಸಾವಿರದ ನಾನೂರು ಮೂವತ್ತು ಎರಡು ಕೋಟಿ,
ಸರೋರುಹ–ಆಸನಗೆ ಇದು ದಿವಸವು ಎಂಬರು ವಿಪಶ್ಚಿತರು ॥ ೬೦ ॥

ಶತಧೃತಿಗೆ ಈ ದಿವಸಗಳು ತ್ರಿಂಶತಿಯು ಮಾಸ, ದ್ವಾದಶ ಅಬ್ದವು,
ಶತವು ಎರಡರೊಳು ಸರ್ವ ಜೀವ ಉತ್ಪತ್ತಿ–ಸ್ಥಿತಿ–ಲಯವು,
ಶ್ರುತಿ ಸ್ಮೃತಿಗಳು ಪೇಳುತ ಇಹವು ಅಚ್ಯುತಗೆ ನಿಮಿಷವು ಇದೆಂದು,
ಸುಖ ಶಾಶ್ವತಗೆ ಪಾಸಟಿ ಯೆಂಬುವರೆ ಬ್ರಹ್ಮಾದಿ ದಿವಿಜರನು ॥ ೬೧ ॥

ಆದಿ-ಮಧ್ಯ-ಅಂತಗಳು ಇಲ್ಲದ ಮಾಧವಗೆ ಇದು ಉಪಚಾರವು ಎಂದು
ಋಗ್-ಆದಿ ವೇದ ಪುರಾಣಗಳು ಪೇಳುವವು ನಿತ್ಯದಲಿ,
ಮೋದಮಯನ ಅನುಗ್ರಹವ ಸಂಪಾದಿಸಿ, ರಮಾ-ಬ್ರಹ್ಮ-ರುದ್ರ-ಇಂದ್ರ ಆದಿಗಳು,
ತಮ್ಮ ತಮ್ಮ ಪದವಿಯನು ಐದಿ ಸುಖಿಸುವರು ॥ ೬೨ ॥

ಈ ಕಥ-ಅಮೃತ ಪಾನ ಸುಖ, ಸು-ವಿವೇಕಿ ಗಳಿಗೆ ಅಲ್ಲದಲೆ,
ವೈಷಿಕ ವ್ಯಾಕುಲ ಕುಚಿತ್ತರಿಗೆ ದೊರೆವುದೆ ಆವ ಕಾಲದಲಿ,
ಲೋಕ ವಾರ್ತೆಯ ಬಿಟ್ಟು, ಇದನ ಅವಲೋಕಿಸುತ ಮೋದಿಪರಿಗೆ ಒಲಿದು,
ಕೃಪಾಕರ ಜಗನ್ನಾಥ ವಿಠಲ ಪೊರೆವನು ಅನುದಿನದಿ ॥ ೬೩ ॥

॥ ಇತಿ ಶ್ರೀ ಕಲ್ಪಸಾಧನ ಸಂಧಿ ಸಂಪೂರ್ಣಂ ॥
॥ ಇತಿ ಶ್ರೀ ಅಪರೋಕ್ಷ ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಕ್ರೀಡಾವಿಲಾಸ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀನಿವಾಸನ ಚರಿತೆಗಳ ಪರಮ ಅನುರಾಗದಿ ಬೆಸೆಗೊಳಲು,
ಮುನಿ ಶೌನಕ ಆದ್ಯರಿಗೆ ಅರುಪಿದನು ಸೂತಾರ್ಯ ದಯದಿಂದ ॥

ಪಚನ–ಭಕ್ಷಣ–ಗಮನ–ಭೋಜನ–ವಚನ–ಮೈಥುನ–ಶಯನ–ವೀಕ್ಷಣ–
ಅಚಲನಾ–ಚಲನ ಪ್ರಯತ್ನದಿ ಸಾಧ್ಯವೇ ಜನಕೆ,
ಶುಚಿ–ಸದನ ದಯದಿಂದ ಜೀವರ ನಿಚಯದೊಳು ತಾ ನಿಂತು ಮಾಡುವ,
ಉಚಿತ–ಅನುಚಿತ ಕರ್ಮಗಳನು ಎಂದರಿದು ಕೊಂಡಾಡು ॥ ೧ ॥

ವಿಷ್ಟರ–ಶ್ರವ ದೇಹ ದೊಳಗೆ ಪ್ರವಿಷ್ಟನು ಆಗಿ ನಿರಂತರದಿ
ಬಹು ಚೇಷ್ಟೆಗಳ ಮಡುತಿರೆ ಕಂಡು ಸಜೀವಿ ಯೆನುತ ಇಹರು,
ಹೃಷ್ಟರಾಗುವರು ಅವನ ನೋಡಿ ಕನಿಷ್ಠರು ಎಲ್ಲರು ಸೇವೆ ಮಾಳ್ಪರು,
ಬಿಟ್ಟ ಕ್ಷಣದಲಿ ಕುಣಪ ಸಮವು ಎಂದು ಅರಿದು ಅನುಪೇಕ್ಷಿಪರು ॥ ೨ ॥

ಕ್ರೀಡೆಗೋಸುಗ ಅವರ–ಅವರ ಗತಿ ನೀಡಲೋಸುಗ ದೇಹಗಳ ಕೊಟ್ಟು ಆಡುವನು ಸ್ವೇಚ್ಛೆಯಲಿ,
ಬ್ರಹ್ಮ–ಈಶ ಆದ್ಯರೊಳು ಪೊಕ್ಕು,
ಮಾಡುವನು ವ್ಯಾಪಾರ ಬಹು ವಿಧ, ಮೂಢ ದೈತ್ಯರೊಳು ಇದ್ದು ಪ್ರತಿದಿನ,
ಕೇಡು ಲಾಭಗಳು ಇಲ್ಲವು ಇದರಿಂದ ಆವ ಕಾಲದಲಿ ॥ ೩ ॥

ಅಕ್ಷರ ಈಢ್ಯನು ಬ್ರಹ್ಮ–ವಾಯು–ತ್ರ್ಯಕ್ಷ–"ಸುರ ಪ" ಸುರ–ಅಸುರರೊಳು
ಅಧ್ಯಕ್ಷನು ಆಗಿದ್ದು ಎಲ್ಲರೊಳು ವ್ಯಾಪಾರ ಮಾಡುತಿಹ,
ಅಕ್ಷಯನು ಸತ್ಯ–ಆತ್ಮಕ ಪರ–ಆಪೇಕ್ಷೆ ಯಿಲ್ಲದೆ,
ಸರ್ವರ ಒಳಗೆ ವಿ–ಲಕ್ಷಣನು ತಾನು ಆಗಿ ಲೋಕವ ರಕ್ಷಿಸುತಲಿ ಇಪ್ಪ ॥ ೪ ॥

ಶ್ರೀ–ಸರಸ್ವತಿ–ಭಾರತೀ–ಗಿರಿಜಾ–ಶಚೀ–ರತಿ–ರೋಹಿಣೀ–ಸಂಜ್ಞಾ–ಶತ ಸುರೂಪ ಆದಿ
ಅಖಿಳ ಸ್ತ್ರೀಯರೊಳು ಸ್ತ್ರೀ ರೂಪ, ವಾಸ ವಾಗಿದ್ದು ಎಲ್ಲರಿಗೆ
ವಿಶ್ವಾಸ ತನ್ನಲಿ ಕೊಡುವ,
ಅವರ ಅಭಿಲಾಷೆಗಳ ಪೂರೈಸುತ ಇಪ್ಪನು ಯೋಗ್ಯತೆಗಳ ಅರಿತು ॥ ೫ ॥

ಕೋಲು ಕುದುರೆಯ ಮಾಡಿ ಆಡುವ ಬಾಲಕರ ತೆರದಂತೆ
ಲಕ್ಷ್ಮೀ ಲೋಲ ಸ್ವಾತಂತ್ರ್ಯ ಗುಣವ ಬ್ರಹ್ಮ ಆದ್ಯರೊಳಗೆ ಇಟ್ಟು,
ಲೀಲೆಗೈವನು ತನ್ನವರಿಗೆ ಅನುಕೂಲನು ಆಗಿದ್ದು ಎಲ್ಲ ಕಾಲದಿ,
ಖುಲ್ಲರಿಗೆ ಪ್ರತಿಕೂಲನು ಆಗಿಹ ಪ್ರಕಟನು ಆಗದಲೆ ॥ ೬ ॥

ಸೌಪರಣಿ ವರ ವಹನ, ನಾನಾ ರೂಪ ನಾಮದಿ ಕರೆಸುತ ಅವರ ಸಮೀಪದಲ್ಲಿದ್ದು
ಅಖಿಳ ವ್ಯಾಪಾರಗಳ ಮಾಡುವನು,
ಪಾಪ ಪುಣ್ಯಗಳು ಎರಡು ಅವರ ಸ್ವ-ರೂಪಗಳ ಅನುಸರಿಸಿ ಉಣಿಪ,
ಪರ-ಉಪಕಾರಿ, ಪರೇಶ, ಪೂರ್ಣ-ಆನಂದ, ಜ್ಞಾನ ಘನ ॥ ೭ ॥

ಅಹರ ನಿದ್ರಾ ಮೈಥುನಗಳ ಅಹರ-ಅಹರ ಬಯಸಿ ಬಳಲುವ,
ಲಕ್ಷ್ಮೀ ಮಹಿತನ ಮಹಾ ಮಹಿಮೆಗಳನು ಎಂತರಿವ ನಿತ್ಯದಲಿ,
ಅಹಿಕ ಸೌಖ್ಯವ ಮರೆದು, ಮನದಲಿ ಗ್ರಹಿಸಿ ಶಾಸ್ತ್ರ-ಅರ್ಥಗಳ,
ಪರಮ-ಉತ್ಸಹದಿ ಕೊಂಡಾಡುತಲೆ ಮೈಮರೆದವರಿಗೆ ಅಲ್ಲದಲೆ ॥ ೮ ॥

ಬಂಧ ಮೋಕ್ಷ ಪ್ರದನ ಜ್ಞಾನವು ಮಂದಮತಿಗಳಿಗೆ ಎಂತು ದೊರೆವುದು,
ಬಿಂದು ಮಾತ್ರ ಸುಖ ಅನುಭವ, ಪರ್ವತಕೆ ಸಮ ದು:ಖವು ಎಂದು ತಿಳಿಯದೆ,
ಅನ್ಯ ದೈವಗಳಿಂದ ಸುಖವ-ಅಪೇಕ್ಷಿಸುವರು,
ಮುಕುಂದನ ಆರಾಧನೆಯ ಬಿಟ್ಟವಗೆ ಉಂಟೆ ಮುಕ್ತಿ ಸುಖ ॥ ೯ ॥

ರಾಜ ತನ್ನ ಅಮಾತ್ಯ ಕರುಣದಿ ನೈಜ ಜನರಿಗೆ ಕೊಟ್ಟು ಕಾರ್ಯ ನಿಯೋಜಿಸುತ
ಮಾನ-ಅಪಮಾನವ ಮಾಳ್ಪ ತೆರದಂತೆ,
ಶ್ರೀ ಜನ-ಅರ್ದನ ಸರ್ವರೊಳಗೆ ಅಪರಾಜಿತನು ತಾನು ಆಗಿ,
ಸರ್ವ ಪ್ರಯೋಜನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ ॥ ೧೦ ॥

ವಾಸುದೇವ ಸ್ವತಂತ್ರವ ಸರೋಜ-ಆಸನ ಆದಿ ಅಮರಾ ಸುರರಿಗೆ ಈಯಲೋಸುಗ ಅರ್ಧವ ತೆಗದು,
ಅದರೊಳು ಅರ್ಧವ ಚತುರ್ ಭಾಗ ಗೈಸಿ,
ವಂದನು ಶತ ವಿಧ, ದ್ವಿ ಪಂಚಾಶತ "ಅಬ್ಜ ಜ"-ಗೆ,
ಅಷ್ಟ ಚತ್ವಾರಿಂಶದ್ ಅನಿಲನಿಗೆ ಇತ್ತ, ವಾಣೀ ಭಾರತೀಗೆ ಅರ್ಧ ॥ ೧೧ ॥

ದ್ವಿತಿಯ ಪಾದವ ತೆಗೆದು ಕೊಂಡು ಅದ ಶತ ವಿಭಾಗವ ಮಾಡಿ,
ತಾ ವಿಂಶತಿ ಉಮೇಶನೊಳು ಇಟ್ಟ, ಇಂದ್ರನೊಳು ಐದು ಅಧಿಕ ಹತ್ತು,
ರತಿಪನೊಳಗೆ ಇನಿತಿಟ್ಟ, ಅಖಿಳ ದೇವತೆಗಳೊಳಗೆ ಈರು-ಐದು,
ಜೀವ ಪ್ರತತಿಯೊಳು ದಶ, ಐದು ಅಧಿಕ ನಾಲ್ವತ್ತು ದೈತ್ಯರೊಳು ॥ ೧೨ ॥

ಕಾರುಣಿಕ ಸ್ವಾತಂತ್ರಿಯತ್ವವ ಮೂರು ವಿಧ ಗೈಸಿ ಎರಡು ತನ್ನೊಳು,
ನಾರಿಗೆ ಒಂದನು ಕೊಟ್ಟ, ಸ್ವಾತಂತ್ರಿಯವ ಸರ್ವರಿಗೆ ಧಾರುಣಿ-ಪ ತನ್ನ ಅನುಗರಿಗೆ
ವ್ಯಾಪಾರ ಕೊಟ್ಟು, ಗುಣ-ಅಗುಣಗಳ ವಿಚಾರ ಮಾಡುವ ತೆರದಿ
ತ್ರಿಗುಣ ವ್ಯಕ್ತಿಯನೆ ಮಾಳ್ಪ ॥ ೧೩ ॥

ಪುಣ್ಯ ಕರ್ಮಕೆ ಸಹಯ ವಾಗುವ ಧನ್ಯರಿಗೆ, ಕಲ್ಯಾದಿ ದೈತ್ಯರ
ಪುಣ್ಯ ಫಲಗಳನು ಈವ, ದಿವಿಜರ ಪಾಪ ಕರ್ಮ ಫಲ ಅನ್ಯ ಕರ್ಮವ ಮಾಳ್ಪರಿಗೆ
ಅನುಗುಣ್ಯ ಜನರಿಗೆ ಕೊಡುವ,
ಬಹು ಕಾರುಣ್ಯ ಸಾಗರನು ಈ ತೆರದಿ ಭಕ್ತರನು ಸಂತೈಪ ॥ ೧೪ ॥

ನಿರುಪಮಗೆ ಸರಿಯುಂಟು ಯೆಂದು ಉಚ್ಚರಿಸುವವ, ತದ್-ಭಕ್ತರೊಳು ಮತ್ಸರಿಸುವವ,
ಗುಣ-ಗುಣಿಗಳಿಗೆ ಭೇದಗಳ ಪೇಳುವವ,
ದರ ಸುದರಶನ ಊರ್ಧ್ವ ಪುಂಡ್ರವ ಧರಿಸುವರೊಳು ದ್ವೇಷಿಸುವ,
ಹರಿ ಚರಿತೆಗಳ ಕೇಳದಲೆ ಲೋಗರ ವಾರ್ತೆ ಕೇಳುವವ ॥ ೧೫ ॥

ಏವಮಾದೀ ದ್ವೇಷವು ಉಳ್ಳ ಕುಜೀವರು ಎಲ್ಲರು ದೈತ್ಯರು ಎಂಬರು,
ಕೋವಿದರ ವಿಜ್ಞಾನ ಕರ್ಮವ ನೋಡಿ ನಿಂದಿಪರು,
ದೇವ ದೇವನ ಬಿಟ್ಟು, ಯಾವತ್-ಜೀವ ಪರಿಯಂತರದಿ ತುಚ್ಛರ ಸೇವೆ ಯಿಂದ
ಉಪ-ಜೀವಿಸುವರು ಅಜ್ಞಾನಕೆ ಒಳಗೆ ಆಗಿ ॥ ೧೬ ॥

ಕಾಮ-ಲೋಭ-ಕ್ರೋಧ-ಮದ-ಹಿಂಸ-ಆಮಯ-ಅನೃತ-ಕಪಟ-
ತ್ರಿ ಧಾಮನ ಅವತಾರಗಳ ಭೇದ-ಅಪೂರ್ಣ ಸುಖ-ಬದ್ಧ-
ಆಮಿಷ ಅನಿವೇದಿತ ಅಭೋಜ್ಯದಿ ತಾಮಸ ಅನ್ನವನು ಉಂಬ ತಾಮಸ,
ಶ್ರೀ-ಮದ-ಅಂಧರ ಸಂಗದಿಂದಲಿ ತಮವೆ ವರ್ಧಿಪುದು ॥ ೧೭ ॥

ಜ್ಞಾನ-ಭಕ್ತಿ-ವಿರಕ್ತಿ-ವಿನಯ-ಪುರಾಣ ಶ್ರವಣ-ಶಾಸ್ತ್ರ ಚಿಂತನ-
ದಾನ-ಶಮ-ದಮ-ಯಜ್ಞ-ಸತ್ಯ-ಅಹಿಂಸ-ಭೂತದಯ-
ಧ್ಯಾನ-ಭಗವನ್ ನಾಮ ಕೀರ್ತನ-ಮೌನ-ಜಪ-ತಪ-ವ್ರತ-
ಸುತೀರ್ಥ ಸ್ನಾನ-ಮಂತ್ರ-ಸ್ತೋತ್ರ-ವಂದನ ಸಜ್ಜನರ ಗುಣವು ॥ ೧೮ ॥

ಲೇಷ ಸ್ವಾತಂತ್ರಿಯ ಗುಣವನು ಪ್ರವೇಶಗೈಸಿದ ಕಾರಣದಿ,
ಗುಣ ದೋಷಗಳು ತೋರುವವು ಸತ್ವ-ಅಸತ್ವ ಜೀವರೊಳು,
ಶ್ವಾಸ-ಭೋಜನ-ಪಾನ-ಶಯನ-ವಿಲಾಸ-ಮೈಥುನ-ಗಮನ-ಹರುಷ-
ಕ್ಲೇಷ-ಸ್ವಪ್ನ-ಸುಷುಪ್ತಿ-ಜಾಗ್ರತಿಯು ಅಹವು ಚೇತನಕೆ ॥ ೧೯ ॥

ಅರ್ಧ ತನ್ನೊಳಗೆ ಇರಿಸಿ ಉಳಿದ ಒಂದು ಅರ್ಧವ ವಿಭಾಗ ಗೈಸಿ,
ವೃಜಿನ ಅರ್ದನನು ಪೂರ್ವದಲಿ ಸ್ವಾತಂತ್ರಿಯವ ಕೊಟ್ಟಂತೆ,
ಸ್ವರ್ಧುನೀ–ಪಿತ ಕೊಡುವ ಅವರ ಸುಖ ವೃದ್ಧಿ ಗೋಸುಗ,
ಬ್ರಹ್ಮ–ವಾಯು–ಕಪರ್ದಿ ಮೊದಲಾದ ಅವರೊಳು ಇದ್ದು ಅವರ ಯೋಗ್ಯತೆಯನು ಅರಿತು ॥ ೨೦ ॥

ಹಲ ಧರ ಅನುಜ ಮಾಳ್ಪ ಕೃತ್ಯವ ತಿಳಿಯದೆ ಆಹಂಕಾರದಿಂದ,
ಎನ್ನ ಉಳಿದು ವಿಧಿ ನಿಷೇದ ಪಾತ್ರರು ಇಲ್ಲ ವೆಂಬುವಗೆ,
ಫಲಗಳ ದ್ವಯ ಕೊಡುವ, ದೈತ್ಯರ ಕಲುಷ ಕರ್ಮವ ಬಿಟ್ಟು ಪುಣ್ಯವ ಸೆಳೆದು,
ತನ್ನೊಳಗೆ ಇಟ್ಟು ಕ್ರಮದಿಂ ಕೊಡುವ ಭಕ್ತರಿಗೆ ॥ ೨೧ ॥

ತೋಯಜ ಆಪ್ತನ ಕಿರಣ ವೃಕ್ಷ–ಛಾಯ ವ್ಯಕ್ತಿಸುವಂತೆ,
ಕಮಲ ದಳ ಆಯತ ಅಕ್ಷನು ಸರ್ವರೊಳು ವ್ಯಾಪಿಸಿದ ಕಾರಣದಿ,
ಹೇಯ ಸದ್ಗುಣ ಕರ್ಮ ತೋರ್ಪವು, ನ್ಯಾಯ ಕೋವಿದರಿಗೆ,
ನಿರಂತರ ಶ್ರೀಯರಸ ಸರ್ವ–ಉತ್ತಮ–ಉತ್ತಮನು ಎಂದು ಪೇಳುವರು ॥ ೨೨ ॥

ಮೂಲ ಕಾರಣ ಪ್ರಕೃತಿ ಯೆನಿಪ ಮಹಾಲಕುಮಿ, ಎಲ್ಲರೊಳಗೆ ಇದ್ದು ಸುಲೀಲೆ ಗೈವುತ
ಪುಣ್ಯ ಪಾಪಗಳ ಅರ್ಪಿಸಲು ಪತಿಗೆ,
ಪಾಲ ಗಡಲೊಳು ಬಿದ್ದ ಜಲ ಕೀಲಾಲವು ಎನಿಪುದೆ,
ಜೀವ ಕೃತ ಕರ್ಮಾಳಿ ತದ್ವತು, ಶುಭವು ಯೆನಿಪವು ಎಲ್ಲ ಕಾಲದಲಿ ॥ ೨೩ ॥

ಜ್ಞಾನ–ಸುಖ–ಬಲ ಪೂರ್ಣ ವಿಷ್ಣುವಿಗೆ ಏನು ಮಾಳ್ಪವು ತ್ರಿ–ಗುಣ ಕಾರ್ಯ,
ಕೃಶಾನುವಿನ ಕೃಮಿಕವಿದು ಭಕ್ಷಿಪದು ಉಂಟೆ ಲೋಕದೊಳು,
ಈ ನಳಿನ–ಜ–ಅಂಡವನು ಬ್ರಹ್ಮ–ಈಶ–ಆನ ಮುಖ್ಯ ಸುರ–ಅಸುರರ
ಕಾಲ–ಅನಳನ ವೋಲ್ ನುಂಗುವಗೆ ಈ ಪಾಪಗಳ ಭಯವೆ ॥ ೨೪ ॥

ಮೋದ ಶಿರ ದಕ್ಷಿಣ ಸು–ಪಕ್ಷ, ಪ್ರಮೋದ ಉತ್ತರ ಪಕ್ಷವು ಎಂದು
ಋಗಾದಿ ಶ್ರುತಿಗಳು ಪೇಳುವವು ಆನಂದ–ಮಯ ಹರಿಗೆ,
ಮೋದ ವೈಷಿಕ ಸುಖ ವಿಶಿಷ್ಟ, ಪ್ರಮೋದ ಪಾರತ್ರಿಕ ಸುಖ ಪ್ರದನು
ಆದ ಕಾರಣದಿಂದ ಮೋದ–ಪ್ರಮೋದನು ಎನಿಸಿದನು ॥ ೨೫ ॥

ಎಂದಿಗಾದರು ವೃಷ್ಟಿ ಯಿಂದ ವಸುಂಧರೆಯೊಳಗೆ ಇಪ್ಪ
ಅಖಿಳ ಜಲದಿಂ ಸಿಂಧು ವೃದ್ಧಿಯನು ಐದುವದೆ, ಬಾರದಿರೆ ಬರಿದು ಅಹುದೆ,
ಕುಂದು ಕೊರತೆಗಳು ಇಲ್ಲದಿಹ ಸ್ವ–ಆನಂದ ಸಂಪೂರ್ಣ ಸ್ವಭಾವಗೆ,
ಬಂದು ಮಾಡುವದೇನು ಕರ್ಮ–ಅಕರ್ಮ ಜನ್ಯ ಫಲ ॥ ೨೬ ॥

ದೇಹ ವೃಕ್ಷದೊಳು ಎರಡು ಪಕ್ಷಿಗಳು ಇಹವು ಎಂದಿಗು ಬಿಡದೆ ಪರಮ ಸ್ನೇಹದಿಂದಲಿ,
ಕರ್ಮ-ಜ ಫಲಗಳು ಉಂಬ ಜೀವ ಖಗ,
ಶ್ರೀ ಹರಿಯು ತಾ ಸಾರ ಭೋಕ್ತನು, ದ್ರೋಹಿಸುವ ಕಲ್ಯಾದಿ ದೈತ್ಯ ಸಮೂಹಕೆ
ಈವ ವಿಶಿಷ್ಟ ಪಾಪವ, ಲೇಶವು ಎಲ್ಲರಿಗೆ ॥ ೨೭ ॥

ದ್ಯುಮಣಿ ಕಿರಣವ ಕಂಡ ಮಾತ್ರದಿ ತಿಮಿರವು ಓಡುವ ತೆರದಿ,
ಲಕ್ಷ್ಮೀ-ರಮಣ ನೋಡಿದ ಮಾತ್ರದಿಂದ ಅಘ ನಾಶವು ಐದುವದು,
ಕಮಲ ಸಂಭವ ಮುಖ್ಯ ಎಲ್ಲಾ ಸುಮನಸರೊಳು ಇಹ ಪಾಪ ರಾಶಿಯು,
ಅಮರ ಮುಖನ-ಅಂದದಲಿ ಭಸ್ಮವ ಮಾಳ್ಪ ಹರಿ ತಾನು ॥ ೨೮ ॥

ಚತುರ ಶತ ಭಾಗದಿ ದಶ ಅಂಶದೊಳು ಇತರ ಜೀವರಿಗೆ ಈವ,
ಲೇಶವ ದಿತಿ-ಜ ದೇವಕ್ಕಳಿಗೆ ಕೊಡುವ ವಿಶಿಷ್ಟ ದು:ಖ ಸುಖ,
ಮತಿವಿಹೀನ ಪ್ರಾಣಿಗಳಿಗೆ ಆಹುತಿಯ ಸುಖ ಮೃತಿ ದು:ಖ,
ಅವರ ಯೋಗ್ಯತೆಯನು ಅರಿತು ಪಿಪೀಲ-ಮಶಕ ಆದಿಗಳಿಗೆ ಈವ ಹರಿ ॥ ೨೯ ॥

ನಿತ್ಯ ನಿರಯ ಅಂಧ ಆಖ್ಯ ಕೂಪದಿ, ಭೃತ್ಯರಿಂದ ಒಡಗೂದಿ,
ಪುನರ-ಆವೃತ್ತಿ ವರ್ಜಿತ ಲೋಕವ ಐದುವ ಕಲಿಯು ದ್ವೇಷದಲಿ,
ಸತ್ಯ-ಲೋಕ-ಅಧಿಪ ಚತುರ್-ಮುಖ ತತ್ವ ದೇವಕ್ಕಳ ಸಹಿತ,
ನಿಜ ಮುಕ್ತಿಯ ಐದುವ ಹರಿ ಪದ-ಅಬ್ಜವ ಭಜಿಸಿ ಭಕುತಿಯಲಿ ॥ ೩೦ ॥

ವಿಧಿ-ನಿಷೇಧಗಳು ಎರಡು ಮರೆಯದೆ ಮಧು-ವಿರೋಧಿಯ ಪಾದಕೆ ಅರ್ಪಿಸು,
ಅದಿತಿ ಮಕ್ಕಳಿಗೆ ಈವ ಪುಣ್ಯವ-ಪಾಪ ದೈತ್ಯರಿಗೆ,
ಸುದರುಶನ-ಧರಗೆ ಈಯದಿರೆ ಬಂದು-ಒದಗಿ ಒಯ್ವರು ಪುಣ್ಯ ದೈತ್ಯರು,
ಅಧಿಪರು ಇಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ ॥ ೩೧ ॥

ತಿಲ-ಜ ಕಶ್ಮಲ ತ್ಯಜಿಸಿ ದೀಪವು ತಿಳಿಯ ತೈಲವ ಗ್ರಹಿಸಿ,
ಮಂದಿರ ದೊಳಗೆ ವ್ಯಾಪಿಸಿ ಯಿಪ್ಪ ಕತ್ತಲೆ ಭಂಗಿಸುವ ತೆರದಿ,
ಕಲಿ ಮೊದಲುಗೊಂಡ ಅಖಿಳ ದಾನವ ಕುಲ-ಜ-ರು ಅನುದಿನ ಮಾಳ್ಪ ಪುಣ್ಯ-ಜ ಫಲವ
ಬ್ರಹ್ಮ ಆದ್ಯರಿಗೆ ಕೊಟ್ಟು ಅಲ್ಲೆ-ಅಲ್ಲೆ ರಮಿಸುವನು ॥ ೩೨ ॥

ಇದ್ದಲೆಯು ನಿತ್ಯದಲಿ ಮೇಧ್ಯ-ಅಮೇಧ್ಯ ವಸ್ತುಗಳ ಉಂಡು,
ಲೋಕದಿ ಶುದ್ಧ-ಸುಚಿ-ಯೆಂದೆನಿಸಿ-ಕೊಂಬನು ವೇದ-ಸ್ಮೃತಿಗಳೊಳು,
ಬುದ್ಧಿ ಪೂರ್ವಕವಾಗಿ ವಿಬುಧರು ಶ್ರದ್ಧೆ ಯಿಂದ ಅರ್ಪಿಸಿದ ಕರ್ಮ,
ನಿಷಿದ್ಧವಾದರು ಸರಿಯೆ, ಕೈಕೊಂಡು ಉದ್ಧರಿಸುತ ಇಪ್ಪ ॥ ೩೩ ॥

ಒಡೆಯರು ಇದ್ದ ವನಸ್ಥ ಫಲಗಳ ಬಡಿದು ತಿಂಬುವರು ಉಂಟೆ,
ಕಂಡರೆ ಹೊಡೆದು ಬಿಸಟುವರು ಎಂಬ ಭಯದಿಂ ನೋಡಲು ಅಂಜುವರು,
ಬಿಡದೆ ಮಾಡುವ ಕರ್ಮಗಳ, ಮನೆ–ಮಡದಿ–ಮಕ್ಕಳು–ಬಂಧುಗಳು
ಕಾರೊಡಲನ ಆಳ್ಗಳು ಯೆಂದ ಮಾತ್ರದಲಿ ಓಡುವವು ದುರಿತ ॥ ೩೪ ॥

ಜ್ಞಾನ ಕರ್ಮ ಇಂದ್ರಿಯಗಳಿಂದ ಏನು–ಏನು ಮಾಡುವ ಕರ್ಮಗಳ
ಲಕ್ಷ್ಮೀ ನಿವಾಸನಿಗೆ ಅರ್ಪಿಸುತಲಿರು ಕಾಲ ಕಾಲದಲಿ,
ಪ್ರಾಣ–ಪತಿ ಕೈಕೊಂಡು ನಾನಾ ಯೋನಿ ಯ್ಯೆದಿಸನು,
ಒಮ್ಮೆ ಕೊಡದಿರೆ ದಾನವರು ಶಳೆದು ಒಯ್ವರು ಎಲ್ಲಾ ಪುಣ್ಯ ರಾಶಿಗಳ ॥ ೩೫ ॥

ಶ್ರುತಿ ಸ್ಮೃತಿ ಅರ್ಥವ ತಿಳಿದು ಅಹಂಮತಿ ವಿಶಿಷ್ಟನು ಕರ್ಮ ಮಾಡಲು,
ಪ್ರತಿ ಗ್ರಹಿಸನು ಪಾಪಗಳನು ಕೊಡುತ ಇಪ್ಪ ನಿತ್ಯ ಹರಿ,
ಚತುರ ದಶ ಭುವನ ಅಧಿಪತಿ ಕೃತ–ಕೃತ–ಕೃತಜ್ಞ ನಿಯಾಮಕನು ಯೆನೆ,
ಮತಿ ಭ್ರಂಶ ಪ್ರಮಾದ ಸಂಕಟ ದೋಷವು ಅವಗಿಲ್ಲ ॥ ೩೬ ॥

ವಾರಿಜ–ಆಸನ ಮುಖ್ಯರು ಆಜ್ಞಾ ಧಾರಕರು, ಸರ್ವ ಸ್ವತಂತ್ರ ರಮಾ–ರಮಣನು
ಎಂದರಿದು ಇಷ್ಟ–ಅನಿಷ್ಟ ಕರ್ಮಫಲ,
ಸಾರ ಭೋಕ್ತನಿಗೆ ಅರ್ಪಿಸಲು ಸ್ವೀಕಾರ ಮಾಡುವ,
ಪಾಪ ಫಲವ ಕುಬೇರ ನಾಮಕ ದೈತ್ಯರಿಗೆ ಕೊಟ್ಟು ಅವರ ನೋಯಿಸುವ ॥ ೩೭ ॥

ಕ್ರೂರ ದೈತ್ಯರೊಳು ಇದ್ದು ತಾನೇ ಪ್ರೇರಿಸುವ ಕಾರಣದಿ ಹರಿಗೆ ಕುಬೇರನು ಎಂಬರು,
ಎಲ್ಲರೊಳು ನಿರ್ಗತ ರತಿಗೆ ನಿರತಿ,
ಸೂರಿ ಗಮ್ಯಗೆ ಸೂರ್ಯನು ಎಂಬರು, ದೂರ ಶೋಕಗೆ ಶುಕ್ಲ ಲಿಂಗ ಶರೀರ
ಯಿಲ್ಲದ ಕಾರಣದಿ ಅಕಾಯನು ಎನಿಸುವನು ॥ ೩೮ ॥

ಪೇಳಲು ಒಶವಲ್ಲದ ಮಹಾ ಪಾಪಾಳಿಗಳನು ಒಂದೇ ಕ್ಷಣದಿ ನಿರ್ಮೂಲ ಗೈಸಲು ಬೇಕು
ಎಂಬುವಗೆ ಒಂದೆ ಹರಿ–ನಾಮ,
ನಾಲಿಗೆಯೊಳು ಉಳ್ಳವಗೆ ಪರಮ ಕೃಪಾಳು ಕೃಷ್ಣನು ಕೈವಿಡಿದು,
ತನ್ನ ಆಲಯದೊಳು ಇಟ್ಟು ಅನುದಿನದಿ ಆನಂದ ಬಡಿಸುವನು ॥ ೩೯ ॥

ರೋಗಿ ಔಷಧ ಪಥ್ಯದಿಂದ ನಿರೋಗಿ ಯೆನಿಸುವ ತೆರದಿ,
ಶ್ರೀಮದ್–ಭಾಗವತ ಸು–ಶ್ರವಣ ಗೈದು ಭವಾಖ್ಯ ರೋಗವನು ನೀಗಿ,
ಶಬ್ದ–ಆದಿ–ಅಖಿಳ ವಿಷಯ ನಿಯೋಗಿಸು ದಶ–ಇಂದ್ರಿಯ ಅನಿಲನೊಳು,
ಶ್ರೀ ಗುರು ಜಗನ್ನಾಥ ವಿಠಲ ಪ್ರೀತನಾಗುವನು ॥ ೪೦ ॥

॥ ಶ್ರೀ: ॥

## ॥ ಶ್ರೀ ಅವರೋಹಣ ತಾರತಮ್ಯ ಸಂಧಿ ॥

ಹರಿಕಥ-ಅಮೃತ-ಸಾರ, ಗುರುಗಳ ಕರುಣದಿಂದ-ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀ-ರಮಣ ನಿಜ ಭಕ್ತರು ಎನಿಸುವ ವಾರಿಜ-ಆಸನ ಮುಖ್ಯ ನಿರ್ಜರ
ತಾರತಮ್ಯವ ಪೇಳ್ವೆ ಸಂಕ್ಷೇಪದಲಿ ಗುರುಬಲದಿ ॥

ಕೇಶವಗೆ-ನಾರಾಯಣಿಗೆ-"ಕಮಲ ಆಸನ"-ಸಮೀರರಿಗೆ-ವಾಣಿಗೆ-
ವೀಶ-ಫಣಿಪ-ಮಹೇಶರಿಗೆ-"ಷಣ್ ಮಹಿಷಿಯರ" ಪದಕೆ,
ಶೇಷ ರುದ್ರರ ಪತ್ನಿಯರಿಗೆ, ಸುವಾಸವ ಪ್ರದ್ಯುಮ್ನರಿಗೆ
ಸಂತೋಷದಲಿ ವಂದಿಸುವೆ ಭಕ್ತಿ-ಜ್ಞಾನ ಕೊಡಲಿ ಎಂದು ॥ ೧ ॥

ಪ್ರಾಣ ದೇವಗೆ ನಮಿಪೆ, ಕಾಮನ ಸೂನು-ಮನು-ಗುರು-ದಕ್ಷ-ಶಚಿ-ರತಿ ಮಾನಿನಿ ಯರಿಗೆ,
ಪ್ರವಹ ದೇವಗೆ, ಸೂರ್ಯ-ಸೋಮ-ಯಮ-ಮಾನವಿಗೆ, ವರುಣನಿಗೆ,
ವೀಣಾ ಪಾಣಿ ನಾರದ ಮುನಿಗೆ ನಮಿಸುವೆ,
ಜ್ಞಾನ-ಭಕ್ತಿ-ವಿರಕ್ತಿ ಮಾರ್ಗವ ತಿಳಿಸಲಿ ಎನಗೆ ಎಂದು ॥ ೨ ॥

ಅನಳ-ಭೃಗು-ದಾಕ್ಷಾಯಣಿ ಯರಿಗೆ, ಕನಕ ಗರ್ಭ-ಜ ಸಪ್ತ ಋಷಿಗಳಿಗೆ ಎಣೆ ಯೆನಿಪ
ವೈವಸ್ವತ ಮನು-ಗಾಧಿ ಸಂಭವಗೆ,
"ದನು ಜ" ನಿರಋತಿ-ತಾರ-ಪ್ರಾವಹಿ-"ವನ ಜ" ಮಿತ್ರಗೆ-ಅಶ್ವಿನೀ-ಗಣಪಾ-
ಧನಪ-ವಿಷ್ವಕ್ಸೇನರಿಗೆ ವಂದಿಸುವೆನು ಅನವರತ ॥ ೩ ॥

ಉಕ್ತ ದೇವರ್ಕಳನು ಉಳಿದು ಎಂಭತ್ತು ಅಯಿದು ಜನರುಗಳು, ಮನುಗಳು,
ಚಿಥ್ಯ ಚಾವನ ಯಮಳರಿಗೆ, ಕರ್ಮಜರು ಎನಿಸುತ ಇಪ್ಪ
ಕಾರ್ತವೀರ್ಯ-ಅರ್ಜುನ ಪ್ರಮುಖ ಶತಸ್ಥರಿಗೆ, ಪರ್ಜನ್ಯ-ಗಂಗ-
ಆದಿತ್ಯ-ಯಮ-ಸೋಮ-ಅನಿರುದ್ಧರ ಪತ್ನಿಯರ ಪದಕೆ ॥ ೪ ॥

ಹುತವಹನ ಅರ್ಧಾಂಗಿನಿಗೆ, ಚಂದ್ರಮ ಸುತ ಬುಧಗೆ, ನಾಮ ಆತ್ಮಿಕ ಉಷಾ ಸತಿಗೆ,
ಛಾಯ ಆತ್ಮಜ ಶನೈಶ್ಚರಗೆ ಆನಮಿಪೆ ಸತತ,
ಪ್ರತಿ ದಿವಸದಲಿ ಬಿಡದೆ ಜೀವ ಪ್ರತತಿ ಮಾಡುವ ಕರ್ಮಗಳಿಗೆ
ಅಧಿಪತಿಯು ಎನಿಪ ಪುಷ್ಕರನ ಪಾದ-ಅಂಬುಜ-ಗಳಿಗೆ ನಮಿಪೆ ॥ ೫ ॥

ಆ ನಮಿಪೆ ಆಜಾನಜ-ರಿಗೆ, ಸುಕೃಶಾನು ಸುತರಿಗೆ, ಗೋ-ವ್ರಜ-ದೊಳಿಹ
ಮಾನಿನಿಯರಿಗೆ, ಚಿರಪಿತರು, ಶತನೂನ ಶತಕೋಟಿ ಮೌನಿ ಜನರಿಗೆ,
ದೇವ ಮಾನವ ಗಾನ ಪ್ರೌಢರಿಗೆ, ಅವನಿಪರಿಗೆ,
ರಮಾ ನಿವಾಸನ ದಾಸ ವರ್ಗಕೆ ನಮಿಪೆನು ಅನವರತ ॥ ೬ ॥

ಅನುಕ್ರಮಣಿಕ ತಾರತಮ್ಯವ ಅನುದಿನದಿ ಸದ್-ಭಕ್ತಿ ಪೂರ್ವಕ ನೆನೆವರಿಗೆ,
ಧರ್ಮ-ಅರ್ಥ-ಕಾಮಾದಿಗಳು ಫಲಿಸುವವು,
ವನ-ಜ ಸಂಭವ ಮುಖ್ಯರು ಅವಯವರು ಎನಿಸುವ ಜಗನ್ನಾಥ ವಿಠಲನ,
ವಿನಯದಿಂದಲಿ ನಮಿಸಿ ಕೊಂಡಾಡುತಿರು ಮರೆಯದಲೆ ॥ ೭ ॥

॥ ಇತಿ ಶ್ರೀ ಅವರೋಹಣ ತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಅನುಕ್ರಮಣಿಕಾ ತಾರತಮ್ಯ ಸಂಧಿ ॥

ಹರಿಕಥ-ಅಮೃತ-ಸಾರ, ಗುರುಗಳ ಕರುಣದಿಂದ-ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಮನುಜ ಉತ್ತಮ ವಿಡಿದು ಸಂಕರುಷಣನ ಪರಿಯಂತರದಿ ಪೇಳಿದ,
ಅನುಕ್ರಮಣಿಕೆಯ ಪದ್ಯವನು ಕೇಳುವುದು ಸಜ್ಜನರು ॥

ಶ್ರೀಮದ್-ಆಚಾರ್ಯರ ಮತ-ಅನುಗ ಧೀಮತಾಂ-ವರರ-ಅಂಘ್ರಿ ಕಮಲಕೆ,
ಸೋಮ ಪಾನ ಅರ್ಹರಿಗೆ, ತಾತ್ವಿಕ ದೇವತಾ ಗಣಕೆ,
ಹೈಮವತಿ, ಷಣ್ ಮಹಿಷಿಯರ ಪದ, ವ್ಯೋಮಕೇಶಗೆ, ವಾಣಿ, ವಾಯೂ, ।
ತಾಮರಸ ಭವ, ಲಕ್ಷ್ಮಿ ನಾರಾಯಣರಿಗೆ ಆನಮಿಪೆ ॥ ೧ ॥

ಶ್ರೀ ಮತಾಂ-ವರ, ಶ್ರೀಪತೇ, ಸತ್-ಕಾಮಿತ ಪ್ರದ, ಸೌಮ್ಯ,
ತ್ರಿ-ಕಕುದ್-ಧಾಮ, ತ್ರಿ ಚತು: ಪಾದ, ಪಾವನ ಚರಿತ, ಚಾರ್ವಾಂಗ,
ಗೋಮತಿ ಪ್ರಿಯ, ಗೌಣ, ಗುರುತಮ, ಸಾಮ ಗಾಯನ ಲೋಲ,
ಸರ್ವ ಸ್ವಾಮಿ, ಮಮ ಕುಲ ದೈವ, ಸಂತೈಸುವದು ಸಜ್ಜನರ ॥ ೨ ॥

ರಾಮ ರಾಕ್ಷಸ ಕುಲ ಭಯಂಕರ, ಸಾಮ-ಜ ಇಂದ್ರಪ್ರಿಯ,
ಮನೋ ವಾಚ-ಆಮ ಗೋಚರ, ಚಿತ್-ಸುಖ-ಪ್ರದ, ಚಾರು ತರ ಸ್ವರತ,
ಭೂಮ, ಭೂ-ಸ್ವರ್ಗ-ಆಪ ವರ್ಗದ ಕಾಮ ಧೇನು, ಸು-ಕಲ್ಪ ತರು,
ಚಿಂತಾಮಣಿ ಯೆಂದು ಎನಿಪ, ನಿಜ ಭಕ್ತರಿಗೆ ಸರ್ವತ್ರ ॥ ೩ ॥

ಸ್ವರ್ಣ ವರ್ಣ, ಸ್ವತಂತ್ರ, ಸರ್ವಗ, ಕರ್ಣ ಹೀನ ಸುಶಯ್ಯ, ಶಾಶ್ವತ,
ವರ್ಣ ಚತುರ ಆಶ್ರಮ ವಿವರ್ಜಿತ, ಚಾರುತರ ಸ್ವರತ, ॥
ಅರ್ಣ ಸಂ-ಪ್ರತಿಪಾದ್ಯ, ವಾಯು-ಸುಪರ್ಣ ವರ ವಹನ, ಪ್ರತಿಮ,
ವಟ ಪರ್ಣ ಶಯನ, ಆಶ್ರಯ (ಆಶ್ಚರ್ಯ) ತಮ, ಸತ್-ಚರಿತ, ಗುಣ ಭರಿತ ॥ ೪ ॥

ಅಗಣಿತ ಸುಗುಣ ಧಾಮ, ನಿಶ್ಚಲ, ಸ್ವಗತ ಭೇದ ವಿಶೂನ್ಯ, ಶಾಶ್ವತ,
ಜಗದ ಜೀವ ಅತ್ಯಂತ ಭಿನ್ನ, ಆಪನ್ನ ಪರಿಪಾಲ,
ತ್ರಿ-ಗುಣ ವರ್ಜಿತ, ತ್ರಿ-ಭುವನ-ಈಶ್ವರ, ಹಗಳು-ಇರುಳು ಸ್ಮರಿಸುತಲಿ ಇಹರ ಬಿಟ್ಟು ಅಗಲ,
ಶ್ರೀಜಗನ್ನಾಥ ವಿಠಲ ವಿಶ್ವ ವ್ಯಾಪಕನು ॥ ೫ ॥

॥ ಶ್ರೀ: ॥

## ॥ ಶ್ರೀ ವಿಘ್ನೇಶ್ವರ ಸ್ತೋತ್ರ ಸಂಧಿ ॥
## ॥ ಶ್ರೀ ಗಣಪತಿ ಸ್ತೋತ್ರ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀಶನ ಅಂಘ್ರಿ ಸರೋಜ ಭೃಂಗ, ಮಹೇಶ ಸಂಭವ, ಮನ್–ಮನದೊಳು ಪ್ರಕಾಶಿಸು ಅನುದಿನ,
ಪ್ರಾರ್ಥಿಸುವೆ ಪ್ರೇಮಾತಿಶಯದಿಂದ,
ನೀ ಸಲಹು ಸತ್–ಜನರ ವೇದವ್ಯಾಸ ಕರುಣಾಪಾತ್ರ,
ಮಹತ್–ಆಕಾಶಪತಿ, ಕರುಣಾಳು, ಕೈಪಿಡಿದು ಎಮ್ಮನು ಉದ್ಧರಿಸು ॥ ೧ ॥

ಏಕದಂತ, ಇಭೇಂದ್ರಮುಖ, ಚಾಮೀಕರ ಕೃತ ಭೂಶಣ ಅಂಗ,
ಕೃಪಾಕಟ ಅಕ್ಷದಿ ನೋಡು ವಿಜ್ಞಾಪಿಸುವೆ ಇನಿತೆಂದು,
ನೋಕನೀಯನ ತುತಿಸುತ ಇಪ್ಪ ವಿವೇಕಿಗಳ ಸಹವಾಸ ಸುಖಗಳ,
ನೀ ಕರುಣಿಸುವುದು ಎಮಗೆ, ಸಂತತ ಪರಮ ಕರುಣಾಳು ॥ ೨ ॥

ವಿಘ್ನರಾಜನೆ, ದುರ್–ವಿಷಯದೊಳು ಮಗ್ನ ವಾಗಿಹ ಮನವ,
ಮಹ ದೋಷಘ್ನ ನಂಘ್ರಿ ಸರೋಜ ಯುಗಳದಿ, ಭಕ್ತಿ ಪೂರ್ವಕದಿ ಲಗ್ನಿವಾಗಲಿ ನಿತ್ಯ,
ನರಕ–ಭಯ–ಅಗ್ನಿಗಳಿಗೆ ಆನಂಜೆ,
ಗುರುವರ ಭಗ್ನ ಗೈಸೆನ್ನ ಅವಗುಣಗಳನ್ನು ಪ್ರತಿ ದಿವಸದಲ್ಲಿ ॥ ೩ ॥

ಧನಪ–ವಿಷ್ವಕ್ಸೇನ–ವೈದ್ಯ ಅಶ್ವಿನಿಗಳಿಗೆ ಸರಿಯೆನಿಪ,
ಷಣ್ಮುಖನ ಅನುಜ, ಶೇಷ ಶತಸ್ಥ ದೇವೋತ್ತಮ, ವಿಯತ್–ಗಂಗಾ ವಿನುತ,
ವಿಶ್ವ ಉಪಾಸಕನೆ, ಸನ್–ಮನದಿ ವಿಜ್ಞಾಪಿಸುವೆ,
ಲಕ್ಷ್ಮೀ ವನಿತೆ ಅರಸನ, ಭಕ್ತಿ–ಜ್ಞಾನ ಕೊಟ್ಟು ಸಲಹುವದು ॥ ೪ ॥

ಚಾರುದೇಷ್ಣ ಆಹ್ವಯನೆನಿಸಿ ಅವತಾರ ಮಾಡಿದೆ ರುಗ್ಮಿಣೀಯಲಿ,
ಗೌರಿ ಅರಸನ ವರದಿ ಉದ್ಧಟರಾದ ರಾಕ್ಷಸರ ಶೌರಿ ಆಜ್ಞದಿ ಸಂಹರಿಸಿ
ಭೂಭಾರ ವಿಳುಹಿದ ಕರುಣಿ,
ತ್ವತ್–ಪಾದಾರವಿಂದಕೆ ನಮಿಪೆ, ಕರುಣಿಪುದು ಎಮಗೆ ಸನ್ಮತಿಯ ॥ ೫ ॥

ಶೂರ್ಪ ಕರ್ಣ ದ್ವಯ, ವಿಜಿತ ಕಂದರ್ಪ ಶರ, ಉದಿತ ಅರ್ಕ ಸನ್ನಿಭ,
ಸರ್ಪ ವರ ಕಟಿ ಸೂತ್ರ, ವೈಕೃತ ಗಾತ್ರ, ಸುಚರಿತ್ರ,
ಸ್ವರ್ಪಿತ ಅಂಕುಶ ರದನ ಕರ, ಖಳ ದರ್ಪ ಭಂಜನ,
ಕರ್ಮ ಸಾಕ್ಷಿಗ, ತರ್ಪಕನು ನೀನಾಗಿ, ತೃಪ್ತಿಯ ಬಡಿಸು ಸಜ್ಜನರ ॥ ೬ ॥

ಖೇಶ, ಪರಮ ಸುಭಕ್ತಿ ಪೂರ್ವಕ, ವ್ಯಾಸ ಕೃತ ಗ್ರಂಥಗಳನು ಅರಿತು,
ಪ್ರಯಾಸವಿಲ್ಲದೆ ಬರೆದು ವಿಸ್ತರಿಸಿದಿಯೊ ಲೋಕದೊಳು,
ಪಾಶ ಪಾಣಿಯೆ, ಪ್ರಾರ್ಥಿಸುವೆ, ಉಪದೇಶಿಸು ಎನಗೆ ಅದರ ಅರ್ಥಗಳ,
ಕರುಣಾ ಸಮುದ್ರ, ಕೃಪಾ ಕಟಾಕ್ಷದಿ ನೋಡಿ ಪ್ರತಿದಿನದಿ ॥ ೭ ॥

ಶ್ರೀಶನ ಅತಿ ನಿರ್ಮಲ ಸು-ನಾಭೀ ದೇಶ (ವ)ಸ್ಥಿತ, ರಕ್ತ ಶ್ರೀಗಂಧಾ ಸು-ಶೋಭಿತ ಗಾತ್ರ,
ಲೋಕ ಪವಿತ್ರ, ಸುರಸ್ತೋತ್ರ,
ಮೂಷಕ ಸು-ವರವಹನ್, ಪ್ರಾಣ ಆವೇಶಯುತ, ಪ್ರಖ್ಯಾತ ಪ್ರಭು,
ಪೂರೈಸು ಭಕ್ತರು ಬೇಡಿದ ಇಷ್ಟಾರ್ಥಗಳ ಪ್ರತಿದಿನದಿ ॥ ೮ ॥

ಶಂಕರ ಆತ್ಮಜ, ದೈತ್ಯರಿಗೆ ಅತಿ ಭಯಂಕರ ಗತಿಗಳ ಈಯ ಲೋಸುಗ,
ಸಂಕಟ ಚತುರ್ಥಿಗನು ಎನಿಸಿ ಅಹಿತ ಅರ್ಥಗಳ ಕೊಟ್ಟು,
ಮಂಕುಗಳ ಮೋಹಿಸುವೆ, ಚಕ್ರ ದರಾಂಕಿತನ ದಿನದಿನದಿ,
ತ್ವತ್-ಪದ ಪಂಕಜಂಗಳಿಗೆ ಎರಗಿ ಬಿನ್ನೈಸುವೆನು ಪಾಲಿಪುದು ॥ ೯ ॥

ಸಿದ್ಧ-ವಿದ್ಯಾಧರ ಗಣ ಸಮ ಆರಾಧ್ಯ ಚರಣ ಸರೋಜ, ಸರ್ವ ಸು-ಸಿದ್ಧಿ ದಾಯಕ,
ಶೀಘ್ರದಿಂ ಪಾಲಿಪುದು ಬಿನ್ನೈಪೆ,
ಬುದ್ಧಿ-ವಿದ್ಯಾ-ಜ್ಞಾನ-ಬಲ-ಪರಿಶುದ್ಧ ಭಕ್ತಿ-ವಿರಕ್ತಿ,
ನಿರುತ ಅನವದ್ಯನ ಸ್ಮೃತಿ, ಲೀಲೆಗಳ ಸುಸ್ತವನ ವದನದಲಿ ॥ ೧೦ ॥

ರಕ್ತ ವಾಸ ದ್ವಯ ವಿಭೂಷಣ, ಉಕ್ತಿ ಲಾಲಿಸು, ಪರಮ ಭಗವದ್-ಭಕ್ತವರ,
ಭವ್ಯ-ಆತ್ಮ, ಭಾಗವತ ಆದಿ ಶಾಸ್ತ್ರದಲಿ ಸಕ್ತವಾಗಲಿ ಮನವು,
ವಿಷಯ ವಿರಕ್ತಿ ಪಾಲಿಸು, ವಿದ್ವದ್ ಆದ್ಯ.
ವಿಮುಕ್ತನೆಂದೆನಿಸು ಎನ್ನ ಭವ ಭಯ ದಿಂದಲಿ ಅನುದಿನದಿ ॥ ೧೧ ॥

ಶುಕ್ರ ಶಿಷ್ಯರ ಸಂಹರಿಪುದಕೆ ಶಕ್ರ ನಿನ್ನನು ಪೂಜಿಸಿದನು,
ಉರುಕ್ರಮ ಶ್ರೀರಾಮಚಂದ್ರನು ಸೇತು ಮುಖದಲ್ಲಿ,
ಚಕ್ರವರ್ತಿ-ಪ ಧರ್ಮ ರಾಜನು ಚಕ್ರ ಪಾಣಿಯ ನುಡಿಗೆ ಭಜಿಸಿದ,
ವಕ್ರತುಂಡನೆ ನಿನ್ನೊಳೆಂತುದೊ ಈಶ ಅನುಗ್ರಹವು ॥ ೧೨ ॥

ಕೌರವೇಂದ್ರನು ನಿನ್ನ ಭಜಿಸದ ಕಾರಣದಿ, ನಿಜಕುಲ ಸಹಿತ ಸಂಹಾರವ ಐದಿದ
ಗುರು ವೃಕೋದರರನ ಗದೆಯಿಂದ,
ತಾರಕ ಅಂತಕನ ಅನುಜ, ಎನ್ನ ಶರೀರದೊಳು ನೀ ನಿಂತು,
ಧರ್ಮ ಪ್ರೇರಕನು ನೀನಾಗಿ, ಸಂತೈಸು ಎನ್ನ ಕರುಣದಲಿ ॥ ೧೩ ॥

ಏಕವಿಂಶತಿ ಮೋದಕ ಪ್ರಿಯ, ಮೂಕರನು ವಾಗ್ಮಿಗಳ ಮಾಳ್ಪೆ
ಕೃಪಾಕರ ಈಶ, ಕೃತಜ್ಞ, ಕಾಮದ, ಕಾಯೋ ಕೈಪಿಡಿದು,
ಲೇಖಕ ಅಗ್ರಣಿ, ಮನ್-ಮನದ ದುರ್-ವ್ಯಾಕುಲವ ಪರಿಹರಿಸು ದಯದಿ,
ಪಿನಾಕಿ ಭಾರ್ಯಾ ತನುಜ, ಮೃದ್-ಭವ ಪ್ರಾರ್ಥಿಸುವೆನೀಗಾ ॥ ೧೪ ॥

ನಿತ್ಯ ಮಂಗಳ ಚರಿತ, ಜಗದ ಉತ್ಪತ್ತಿ-ಸ್ಥಿತಿ-ಲಯ-ನಿಯಮನ-ಜ್ಞಾನ ತ್ರಯಪ್ರದ-
ಬಂಧ-ಮೋಚಕ ಸುಮನಸ-ಅಸುರರ ಚಿತ್ತ ವೃತ್ತಿಗಳಂತೆ ನಡೆವ
ಪ್ರಮತ್ತನಲ್ಲ ಸುಹೃತ್-ಜನ-ಆಪ್ತನ,
ನಿತ್ಯದಲಿ ನೆನೆನೆನೆದು ಸುಖಿಸುವ ಭಾಗ್ಯ ಕರುಣಿಪುದು ॥ ೧೫ ॥

ಪಂಚಭೇದ ಜ್ಞಾನವರುಪು, ವಿರಿಂಚಿ ಜನಕನ ತೋರು ಮನದಲಿ,
ವಾಂಛಿತಪ್ರದ, ಒಲುಮೆ ಯಿಂದಲಿ ದಾಸನು ಎಂದರಿದು,
ಪಂಚವಕ್ತ್ರನ ತನಯ, ಭವದೊಳು ವಂಚಿಸದೆ ಸಂತೈಸು,
ವಿಷಯದಿ ಸಂಚರಿಸದಂದದಲಿ ಮಾಡು ಮನಾದಿ ಕರಣಗಳ ॥ ೧೬ ॥

ಏನು ಬೇಡುವದಿಲ್ಲ ನಿನ್ನ, ಕುಯೋನಿಗಳು ಬರಲು ಅಂಜೆ,
ಲಕ್ಷ್ಮೀ-ಪ್ರಾಣಪತಿ ತತ್ವೇಶರ ಇಂದ ಒಡಗೂಡಿ ಗುಣಕಾರ್ಯ, ॥
ತಾನೆ ಮಾಡುವನೆಂಬ ಈ ಸು-ಜ್ಞಾನವೇ ಕರುಣಿಪುದೆಮಗೆ,
ಮಹಾನು ಭಾವ ಮುಹುರ್-ಮುಹು: ಪ್ರಾರ್ಥಿಸುವೆ ಇನಿತೆಂದು ॥ ೧೭ ॥

ನಮೊ ನಮೋ ಗುರುವರ್ಯ ವಿಬುಧ ಉತ್ತಮ, ವಿವರ್ಜಿತ ನಿದ್ರ,
ಕಲ್ಪದ್ರುಮನೆನಿಪ ಭಜಕರಿಗೆ, ಬಹುಗುಣ ಭರಿತ, ಶುಭ ಚರಿತ,
ಉಮೆಯ ನಂದನ, ಪರಿಹರಿಸು ಅಹಂ-ಮಮತೆ ಬುದ್ಧಿ ಆದಿ ಇಂದ್ರಿಯಗಳ
ಆಕ್ರಮಿಸಿ ದಣಿಸುತಲಿಹವು, ಭವದೊಳಗೆ ಆವ ಕಾಲದಲಿ ॥ ೧೮ ॥

ಜಯಜಯತು ವಿಘ್ನೇಶ, ತಾಪ ತ್ರಯ ವಿನಾಶನ, ವಿಶ್ವ-ಮಂಗಳ,
ಜಯಜಯತು ವಿದ್ಯ-ಪ್ರದಾಯಕ, ವೀತ ಭಯ-ಶೋಕ,
ಜಯಜಯತು ಚಾರು ಅಂಗ, ಕರುಣಾ ನಯನದಿಂದಲಿ ನೋಡಿ,
ಜನ್ಮ ಆಮಯ ಮೃತಿಗಳನು ಪರಿಹರಿಸು, ಭಕ್ತರಿಗೆ ಭವದೊಳಗೆ ॥ ೧೯ ॥

ಕಡು ಕರುಣಿ ನೀನೆಂದರಿದು ಹೇರೊಡಲ ನಮಿಸುವೆನು ನಿನ್ನಡಿಗೆ,
ಬೆಂಬಿಡದೆ ಪಾಲಿಸು, ಪರಮ ಕರುಣಾಸಿಂಧು, ಎಂದೆಂದೂ,
ನಡು ನಡುವೆ ಬರುತಿಪ್ಪ ವಿಘ್ನವ ತಡೆದು, ಭಗವನ್ನಾಮ ಕೀರ್ತನ ನುಡಿದು ನುಡಿಸು ಎನ್ನಿಂದ
ಪ್ರತಿದಿವಸದಲಿ ಮರೆಯದಲೆ ॥ ೨೦ ॥

ಏಕ ವಿಂಶತಿ ಪದಗಳು ಎನಿಸುವ ಕೋಕನದ ನವಮಾಲಿಕೆಯ,
ಮೈನಾಕಿ ತನಯ ಆಂತರ್ಗತ ಶ್ರೀ-ಪ್ರಾಣ ಪತಿಯೆನಿಪ,
ಶ್ರೀಕರ ಜಗನ್ನಾಥ ವಿಠಲ ಸ್ವೀಕರಿಸಿ,
ಸ್ವರ್ಗ ಆಪವರ್ಗದಿ ತಾ ಕೊಡಲಿ ಸೌಖ್ಯಗಳ ಭಕ್ತರಿಗೆ ಆವ ಕಾಲದಲಿ ॥ ೨೧ ॥

॥ ಇತಿ ಶ್ರೀ ವಿಘ್ನೇಶ್ವರ ಸ್ತೋತ್ರ ಸಂಧಿ ಸಂಪೂರ್ಣಂ ॥
॥ ಇತಿ ಶ್ರೀ ಗಣಪತಿ ಸ್ತೋತ್ರ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ಅಣುತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ವಿಷ್ಣು ಸರ್ವ–ಉತ್ತಮನು, ಪ್ರಕೃತಿ ಕನಿಷ್ಠಳು ಎನಿಪಳು ಅನಂತ ಗುಣ,
ಪರಮೇಷ್ಠಿ–ಪವನರು ಕಡಿಮೆ, ವಾಣೀ ಭಾರತಿಗಳು ಅಧಮ,
ವಿಷ್ಣು ವಹನ–ಫಣೀಂದ್ರ–ಮೃಡರಿಗೆ ಕೃಷ್ಣ ಮಹಿಷಿಯರು ಅಧಮರು,
ಇವರೊಳು ಶ್ರೇಷ್ಠಳು ಎನಿಪಳು ಜಾಂಬವತಿ ಆವೇಶ ಬಲದಿಂದ ॥ ೧ ॥

ಪ್ಲವಗ ಪನ್ನಗಪ ಅಹಿ ಭೂಷಣ ಯುವತಿಯರು ಸಮ ತಮ್ಮೊಳಗೆ,
ಜಾಂಬವತಿಗಿಂದಲಿ ಕಡಿಮೆ ಇವರು, ಇಂದ್ರ–ಕಾಮರಿಗೆ ಅವರ ಪ್ರಾಣನು,
ಕಡಿಮೆ ಕಾಮನ ಕುವರ–ಶಚಿ–ರತಿ–ದಕ್ಷ–ಗುರು–ಮನು,
ಪ್ರವಹ ಮಾರುತ ಕೊರತೆ ಯೆನಿಸುವ ಆರು ಜನರಿಂದ ॥ ೨ ॥

ಯಮ–ದಿವಾಕರ–ಚಂದ್ರ–ಮಾನವಿ ಸಮರು ಕೋಣ–ಪ ಪ್ರವಹಗೆ ಅಧಮರು,
ದ್ಯುಮಣಿಗಿಂದಲಿ ವರುಣ ನೀಚನು, ನಾದದ ಅಧಮನು,
ಸುಮನಸ ಆಸ್ಯ–ಪ್ರಸೂತಿ–ಭೃಗು ಮುನಿ ಸಮರು ನಾರದಗೆ ಅಧಮರು,
ಅತ್ರಿ ಪ್ರಮುಖ ವಿಶ್ವಾಮಿತ್ರ ವೈವಸ್ವತರು ಅನಳಗೆ ಅಧಮ ॥ ೩ ॥

ಮಿತ್ರ ತಾರಾ ನಿರಋತಿ ಪ್ರವಹಾ ಪತ್ನಿ ಪ್ರಾವಹಿ ಸಮರು,
ವಿಶ್ವಾಮಿತ್ರಗಿಂದಲಿ ಕೊರತೆ,
ವಿಷ್ವಕ್ಸೇನ–ಗಣನಾಥ–"ವಿತ್ತ ಪತಿ"–ಅಶ್ವಿನಿಗಳು ಅಧಮರು,
ಮಿತ್ರ ಮೊದಲಾದ ಅವರಿಗಿಂದಲಿ ಬಿತ್ತರಿಪೆನು ಶತಸ್ಥ ಮನುಜರ ವ್ಯೂಹ ನಾಮಗಳ ॥ ೪ ॥

ಮರುತರು ಒಂಭತ್ತು ಅಧಿಕ ನಾಲ್ವತ್ತು, ಎರಡು ಅಶ್ವಿನಿ,
ವಿಶ್ವೇದೇವರು ಎರಡು ಅಯಿದು, ಹನ್ನೊಂದು ರುದ್ರರು, ದ್ವಾದಶ ಆದಿತ್ಯ,
ಗುರು, ಪಿತೃ ತ್ರಯ, ಅಷ್ಟ ವಸುಗಳು, ಭರತ–ಭಾರತಿ–ಪೃಥ್ವಿ–ಋಭುವು
ಎಂದರಿವುದು ಇವರನು ಸೋಮರಸ ಪಾನ–ಅರ್ಹರು–ಅಹುದು–ಎಂದು ॥ ೫ ॥

ಈ ದಿವೌಕಸರೊಳಗೆ ಉಕ್ತರು ಐದು ಅಧಿಕ ದಶ,
ಉಳಿದ ಎಂಭತ್ತು ಐದು ಶೇಷರಿಗೆ ಎಣೆ ಯೆನಿಸುವರು ಧನ-ಪ ವಿಘ್ನೇಶಾ,
ಸಾಧು ವೈವಸ್ವತ-ಸ್ವಯಂಭುವ-ಶ್ರೀದ ತಾಪಸರ ಉಳಿದು,
ಮನು ಏಕಾದಶರು ವಿಘ್ನೇಶ-ಗಿಂತಲಿ ಕೊರತೆ ಯೆನಿಸುವರು ॥ ೬ ॥

ಚವನ ನಂದನ ಕವಿ-ಬೃಹಸ್ಪತಿ "ಅವರ ಜ" ಉಚಿಥ್ಯಮುನಿ-ಪಾವಕ-
ಧೃವ-ನಹುಷ-ಶಶಿಬಿಂದು-ಪ್ರಿಯವ್ರತನು-ಪ್ರಹ್ಲಾದ-
"ಕುವಲಯ ಪ ರು" ಉಕ್ತೇತರಿಂದಲಿ ಅವರ ರೋಹಿಣಿ-ಶಾಮಲಾ-ಜಾಹ್ನವಿ-
ವಿರಾಟ್ ಪರ್ಜನ್ಯ-ಸಂಜ್ಞಾ ದೇವಿಯರು ಅಧಮ ॥ ೭ ॥

ದ್ಯುನದಿ-ಗಿಂತಲಿ ನೀಚರು ಎನಿಪರು ಅನಭಿಮಾನಿ ದಿವೌಕಸರು,
ಕೇಚನ ಮುನಿಗಳಿಗೆ ಕಡಿಮೆ, ಸ್ವಾಹಾ ದೇವಿಗೆ ಅಧಮ ಬುಧ,
ಎನಿಸುವಳು ಉಷಾ ದೇವಿ ನೀಚಳು, ಶನಿ ಕಡಿಮೆ, ಕರ್ಮ ಅಧಿಪತಿ
ಸದ್-ವಿನುತ ಪುಷ್ಕರ ನೀಚನು ಎನಿಸುವ ಸೂರ್ಯ ನಂದನಗೆ ॥ ೮ ॥

ಕೊರತೆ ಯೆನಿಪರು ಅಶೀತಿ ಋಷಿ ಪುಷ್ಕರಗೆ,
ಊರ್ವಶಿ ಮುಖ್ಯ ಶತ ಅಪ್ಸರರು ತುಂಬುರ ಮುಖರು ಆಜಾನಜರು ಎನಿಸುತಿಹರು,
ಕರೆಸುವುದು ಅನಳಗಣ ನಾಲ್ವತ್ತು-ಅರೆ ಚತುರ್-ದಶ ದ್ವಿ-ಅಷ್ಟ ಸಾವಿರ
ಹರಿ ಮಡದಿಯರು ಸಮರು ಎನಿಸುವರು ಪಿಂತೆ ಪೇಳ್ವರಿಗೆ ॥ ೯ ॥

ತದವರರು ಅನಾಖ್ಯಾತ ಅಪ್ಸರ ಸುದತಿಯರು ಕೃಷ್ಣ-ಅಂಗ ಸಂಗಿಗಳು,
ಅದರ ತರುವಾಯದಲಿ ಚಿರಪಿತರುಗಳು,
ಇವರಿಂದ ತ್ರಿ-ದಶ ಗಂಧರ್ವ ಗಣ, ಇವರಿಂದ ಅಧಮ ನರ ಗಂಧರ್ವರು,
ಇವರಿಂದ ಉದಧಿ ಮೇಲೆ ಅಖಿಳ ಪತಿಗಳು ಅಧಮರು ನೂರು ಗುಣದಿಂದ ॥ ೧೦ ॥

ಪೃಥ್ವಿ ಪತಿಗಳಿಗಿಂದ ಶತ ಮನುಜ-ಉತ್ತಮರು ಕಡಿಮೆ ಎನಿಪರು,
ಇವರಿಂದ ಉತ್ತರ-ಉತ್ತರ ನೂರು ಗುಣದಿಂದ ಅಧಿಕರು ಆದವರ
ನಿತ್ಯದಲಿ ಚಿಂತಿಸುತ ನಮಿಸುತ ಭೃತ್ಯನು-ಆನು-ಅಹುದು-ಎಂಬ,
ಭಕ್ತರ ಚಿತ್ತದಲಿ ನೆಲೆಗೊಂಡು ಕರುಣಿಪರು ಅಖಿಳ ಸೌಖ್ಯಗಳ ॥ ೧೧ ॥

ದ್ರುಮ-ಲತಾ-ತೃಣ-ಗುಲ್ಮ ಜೀವರು ಕ್ರಮದಿ ನೀಚರು,
ಇವರಿಗಿಂತ ಅಧಮರು ಎನಿಸುವರು ನಿತ್ಯ ಬದ್ಧರಿಗಿಂತಲು ಅಜ್ಞಾನಿ,
ತಮಸಿಗೆ ಯೋಗ್ಯರ ಭೃತ್ಯರು ಅಧಮರು, ಅಮರುಷ ಆದಿ ಅಭಿಮಾನಿ ದೈತ್ಯರು,
ನಮುಚಿ ಮೊದಲಾದ ಅವರಿಗಿಂತಲಿ ವಿಪ್ರಚಿತ ನೀಚ ॥ ೧೨ ॥

ಅ-ಲಕುಮಿಯು ತಾ ನೀಚಳು ಎನಿಪಳು, ಕಲಿ ಪರಮ ನೀಚ ತಮ,
ಅವನಿಂದ ಉಳಿದ ಪಾಪಿಗಳು ಇಲ್ಲ ನೋಡಲು ಈ ಜಗ ತ್ರಯದಿ,
ಮಲ ವಿಸರ್ಜನ ಕಾಲದಲಿ-ಕತ್ತಲೆ ಯೊಳಗೆ-ಕಲ್ಮಷ ಕುಮಾರ್ಗ
ಸ್ಥಲಗಳಲಿ, ಚಿಂತನೆಯ ಮಾಳ್ಪುದು ಬಲ್ಲವರು ನಿತ್ಯ ॥ ೧೩ ॥

ಸತ್ವ ಜೀವರ ಮಾನಿ ಬ್ರಹ್ಮನು, ನಿತ್ಯ ಬದ್ಧರೊಳಗೆ ಪುರಂಜನ,
ದೈತ್ಯ ಸಮುದಾಯ ಅಧಿಪತಿ ಕಲಿಯು ಎನಿಪ,
ಪವಮಾನ ನಿತ್ಯದಲಿ ಅವರ ಓಳಗೆ ಕರ್ಮ ಪ್ರವರ್ತಕನು ತಾನು ಆಗಿ,
ಶ್ರೀ ಪುರುಷ-ಉತ್ತಮನ ಸಂಪ್ರೀತಿ-ಗೋಸುಗ ಮಾಡಿ ಮಾಡಿಸುವ ॥ ೧೪ ॥

ಪ್ರಾಣ ದೇವನು ತ್ರಿವಿಧರೊಳಗೆ ಪ್ರವೀಣ ತಾನು ಎಂದು ಎನಿಸಿ,
ಅಧಿಕಾರ ಅನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುವ,
ಜ್ಞಾನ ಭಕ್ತಿ ಸುರರ್ಗೆ, ಮಿಶ್ರ ಜ್ಞಾನ ಮಧ್ಯಮ ಜೀವರಿಗೆ,
ಅಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತ ಇಪ್ಪ ॥ ೧೫ ॥

ದೇವ ದೈತ್ಯರ ತಾರತಮ್ಯವ ಈ ವಿಧದಿ ತಿಳಿದು ಎಲ್ಲರೊಳು
ಲಕ್ಷ್ಮೀ-ವರನು ಸರ್ವ-ಉತ್ತಮನು ಎಂದು ಅರಿದು ನಿತ್ಯದಲಿ,
ಸೇವಿಸುವ ಭಕ್ತರಿಗೆ ಒಲಿದು ಸುಖವ ಈವ ಸರ್ವತ್ರದಲಿ, ಸುಖಮಯ,
ಶ್ರೀ ವಿರಿಂಚಿ ಆದಿ ಅಮರ ವಂದಿತ ಜಗನ್ನಾಥ ವಿಠಲನು ॥ ೧೬ ॥

॥ ಇತಿ ಶ್ರೀ ಅಣುತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ದೈತ್ಯತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀಶ ಮುಕ್ತ–ಅಮುಕ್ತ ಸುರ ವರ ವಾಸುದೇವಗೆ ಭಕ್ತಿಯಲಿ ಕಮಲ–ಆಸನನು ಪೇಳಿದನು
ದೈತ್ಯ ಸ್ವಭಾವ ಗುಣಗಳನು ॥

ಎನಗೆ ನಿನ್ನಲಿ ಭಕ್ತಿ ಜ್ಞಾನಗಳು ಎನಿತಿಹವೊ ಪ್ರಾಣನಲಿ ತಿಳಿಯದೆ,
ಹನುಮದ್–ಆದಿ–ಅವತಾರಗಳ ಭೇದಗಳ ಪೇಳುವವ ದನು–ಜ,
ಘೋರ–ಅಂಧಂ–ತಮಸಿಗೆ ಯೋಗ್ಯನು ನಸಂಶಯ,
ನಿನ್ನ ಬೈವರ ಕೊನೆಯ ನಾಲಿಗೆ ಪಿಡಿದು ಛೇದಿಪೆನು ಎಂದನು ಅಬ್ಜ ಭವ ॥ ೧ ॥

ಜ್ಞಾನ ಬಲ ಸುಖ ಪೂರ್ಣ ವ್ಯಾಪ್ತಗೆ ಹೀನ ಗುಣನು ಎಂಬುವನು,
ಈಶ್ವರ ತಾನೆ ಯೆಂಬುವ, ಸಚ್ಚಿದ್–ಆನಂದ–ಆತ್ಮಗೆ ಉತ್ಪತ್ತಿ,
ಶ್ರೀನಿತಂಬಿನಿಗೆ–ಈಶಗೆ ವಿಯೋಗಾನು ಚಿಂತನೆ,
ಛೇದ ಭೇದ ವಿಹೀನ ದೇಹಗೆ ಶಸ್ತ್ರಗಳ ಭಯ ಪೇಳುವವ ದೈತ್ಯ ॥ ೨ ॥

ಲೇಶ ಭಯ ಶೋಕ ಆದಿ ಶೂನ್ಯಗೆ ಕ್ಲೇಶಗಳು ಪೇಳುವವ,
ರಾಮ ವ್ಯಾಸ ರೂಪಂಗಳಿಗೆ ಋಷಿ ವಿಪ್ರತ್ವ ಪೇಳುವವ,
ದಾಶರಥಿ ಕೃಷ್ಣ ಆದಿ ರೂಪಕೆ ಕೇಶಖಂಡನೆ ಪೇಳ್ವ,
ಮಕ್ಕಳಿ–ಗೋಸುವ ಶಿವ ಅರ್ಚನೆಯ ಮಾಡಿದನು ಎಂಬುವವ ದೈತ್ಯ ॥ ೩ ॥

ಪಾಪ ಪರಿಹಾರ–ಅರ್ಥ ರಾಮ ಉಮಾ–ಪತಿಯ ನಿರ್ಮಿಸಿದ,
ಭಗವದ್–ರೂಪ–ರೂಪಕೆ ಭೇದ ಚಿಂತನೆ ಮಾಳ್ಪ ಮಾನವನು,
ಆಪಗಳು ಸತ್–ತೀರ್ಥ, ಗುರು–ಮಾತಾ–ಪಿತರ–ಪ್ರಭು–ಪ್ರತಿಮ–ಭೂತ ದಯಾಪರರು
ಕಂಡವರೆ ದೇವರು ಎಂಬುವನೆ ದೈತ್ಯ ॥ ೪ ॥

ಸುಂದರ ಸ್ವಯಂ–ವ್ಯಕ್ತವು ಚಿದ್–ಆನಂದ ರೂಪಗಳು ಎಂಬುವನು,
ನರರಿಂದ ನಿರ್ಮಿತ ಈಶ್ವರಗೆ ಅಭಿನಮಿಸುತಿಹ ನರನು,
ಕಂದು ಗೊರಳ–ದಿವಾಕರನು–ಹರಿಯು ಒಂದೆ, ಸೂರ್ಯ ಸುರ–ಉತ್ತಮ
ಜಗದ್–ವಂದ್ಯನು ಎಂಬುವ, ವಿಷ್ಣು ದೂಷಣೆ ಮಾಡಿದವ ದೈತ್ಯ ॥ ೫ ॥

ನೇಮದಿಂದ ಅಸ್ವತ್ಥ ತುಲಸೀ ಸೋಮ-ಧರನಲಿ ವಿಮಲ ಶಾಲಿಗ್ರಾಮಗಳನು ಇಟ್ಟು
ಅಭಿನಮಿಪ ನರ ಮುಕ್ತಿಯೋಗ್ಯ ಸದಾ
ಭೂಮಿಯೊಳು ಧರ್ಮ-ಅರ್ಥ-ಮುಕ್ತಿ-"ಸು ಕಾಮ" ಅಪೇಕ್ಷೆಗಳಿಂದ
ಶಾಲಿಗ್ರಾಮಗಳ ವ್ಯತಿರಿಕ್ತ ವಂದಿಸೆ ದು:ಖವ ಐದುವವನು ॥ ೬ ॥

ವಿತತ ಮಹಿಮನ ಬಿಟ್ಟು ಸುರರಿಗೆ ಪೃಥಕು ವಂದನೆ ಮಾಳ್ಪ ಮಾನವ,
ದಿತಿ-ಜ-ನೇ ಸರಿ, ಹರಿಯು ತಾ ಸಂಸ್ಥಿತನು ಎನಿಸನು ಅಲ್ಲಿ,
ಚತುರ ಮುಖ ಮೊದಲಾದ ಅಖಿಳ ದೇವತೆ-ಗಳೊಳಗೆ ಇಹನು ಎಂದು
ಲಕ್ಷ್ಮೀ-ಪತಿಗೆ ವಂದಿಸೆ ಒಂದು ಅರಕ್ಷಣ ಬಿಟ್ಟು ಅಗಲನು ಅವರ ॥ ೭ ॥

ಶೈವ ಶೂದ್ರ ಕರ-ಅರ್ಚಿತ ಮಹಾ ದೇವ ವಾಯು ಹರಿ ಪ್ರತಿಮೆ,
ವೃಂದಾವನದಿ ಮಾಸ ದ್ವಯ-ದೊಳಿಹ ತುಲಸಿ,
ಅಪ್ರಸವ ಗೋ, ವಿವಾಹ ವರ್ಜಿತ ಅಶ್ವತ್ಥಾ ವಿಟಪಿಗಳ,
ಭಕ್ತಿ ಪೂರ್ವಕ ಸೇವಿಸುವ ನರ ನಿತ್ಯ ಶಾಶ್ವತ ದು:ಖವ ಐದುವವನು ॥ ೮ ॥

ಕಮಲ ಸಂಭವ ಮುಖ್ಯ ಮನುಜ-ಉತ್ತಮರ ಪರ್ಯಂತರದಿ ಮುಕ್ತರು,
ಸಮ ಶತ-ಆಯುಷ್ಯ-ಉಳ್ಳವನು ಕಲಿ ಬ್ರಹ್ಮನ-ಉಪಾದಿ,
ಕ್ರಮದಿ ನೀಚರು ದೈತ್ಯರು, ನರ-ಅಧಮರ ವಿಡಿದು,
ಕು-ಲಕ್ಷ್ಮಿ ಕಲಿ ಅನುಪಮರು ಎನಿಸುವರು ಅಸುರರೊಳು ದ್ವೇಷ ಆದಿ ಗುಣದಿಂದ ॥ ೯ ॥

ವನ-ಜ ಸಂಭವನ ಅಬ್ದ ಶತ ಒಬ್ಬನೆ ಮಹಾ ಕಲಿ ಶಬ್ದ ವಾಚ್ಯನು,
ದಿನ ದಿನಗಳಲಿ ಬೀಳ್ವರು ಅಂಧಂತಮದಿ ಕಲಿ ಮಾರ್ಗ,
ದನು-ಜ-ರ ಎಲ್ಲರ ಪ್ರತೀಕ್ಷಿಸುತ, ಬ್ರಹ್ಮನ ಶತ-ಅಬ್ದ-ಅಂತದಲಿ,
ಲಿಂಗವು ಅನಿಲನ ಗದಾ ಪ್ರಹಾರ-ದಿಂದಲಿ ಭಂಗವು ಐದುವದು ॥ ೧೦ ॥

ಮಾರುತನ ಗದೆ-ಯಿಂದ ಲಿಂಗ ಶರೀರ ಪೋದ-ಅನಂತರ,
ತಮೋ ದ್ವಾರವ ಐದಿ ಸ್ವರೂಪ ದು:ಖಗಳ ಅನುಭವಿಸುತ ಇಹರು,
ವೈರ ಹರಿ ಭಕ್ತರಲಿ ಹರಿಯಲಿ ತಾರತಮ್ಯದಲಿ ಇರುತಿಹುದು ಸಂಸಾರದಲ್ಲಿ,
ತಮಸ್ಸಿನಲಿ ಅತ್ಯಧಿಕ ಕಲಿಯಲ್ಲಿ ॥ ೧೧ ॥

ಜ್ಞಾನವು ಎಂಬುದೇ ಮಿಥ್ಯ, ಅ-ಸಮೀಚೀನ ದು:ಖ ತರಂಗವೆ
ಸಮೀಚೀನ ಬುದ್ಧಿ, ನಿರಂತರದಿ ಕಲಿಗೆ ಇಹುದು,
ದೈತ್ಯರೊಳು ಹೀನಳು ಎನಿಪಳು ಶತ ಗುಣದಿ, ಕಲಿ ಮಾನಿನಿಗೆ ಶತ ವಿಪ್ರಚಿತ್ತಿಗೆ,
ಊನ ಶತ ಗುಣ ಕಾಲನೇಮಿಯೆ ಕಂಸನು ಎನಿಸಿದನು ॥ ೧೨ ॥

ಕಾಲನೇಮಿಗೆ ಪಂಚ ಗುಣದಿಂ ಕೀಳು ಮಧು–ಕೈಟಭರು,
ಜನ್ಮವ ತಾಳಿ ಇಳೆಯೊಳು ಹಂಸ–ಡಿಭಿಕ ಆಹ್ವಯದಿ ಕರೆಸಿದರು,
ಐಳ ನಾಮಕ ವಿಪ್ರಚಿತ್ತ ಸಮ ಆಳು ಯೆನಿಪ,
"ಹಿರಣ್ಯ ಕಶ್ಯಪು" ಶೂಲ ಪಾಣೀ ಭಕ್ತ ನರಕಗೆ ಶತ ಗುಣ ಅಧಮನು ॥ ೧೩ ॥

ಗುಣಗಳ–ತ್ರಯ ನೀಚರು ಎನಿಸುವ "ಕನಕ ಕಸಿಪುಗೆ" "ಹಾಟಕ ಅಂಬಕಗೆ",
ಎಣೆ ಯೆನಿಪ ಮಣಿಮಂತ–ಗಿಂತಲಿ ಕಿಂಚಿದ್–ಊನ ಬಕ,
ದನು–ಜ–ವರ ತಾರಕನು ವಿಂಶತಿ ಗುಣದಿ ನೀಚನು,
ಲೋಕ ಕಂಟಕನು ಎನಿಪ ಶಂಬರ ತಾರಕ–ಅಸುರಗೆ ಅಧಮ ಷಡ್–ಗುಣದಿ ॥ ೧೪ ॥

ಸರಿ ಯೆನಿಸುವರು ಸಾಲ್ವನಿಗೆ ಸಂಕರನಿಗೆ, ಅಧಮನು ಶತ ಗುಣದಿ ಶಂಬರಗೆ,
ಷಡ್–ಗುಣ ನೀಚನು ಎನಿಪ ಹಿಡಿಂಬಕಾ–ಬಾಣ–ಅಸುರನು ದ್ವಾಪರ ಕೀಚಕನು
ನಾಲ್ವರು ಸಮರು, ದ್ವಾಪರನೆ ಶಕುನೀ ಕರೆಸಿದನು ಕೌರವಗೆ
ಸಹ–ಉದರ–ಮಾವನು ಅಹುದು ಎಂದು ॥ ೧೫ ॥

ನಮುಚಿ ಇಲ್ವರ ಪಾಕ ನಾಮಕ ಸಮರು, ಬಾಣಾದ್ಯರಿಗೆ ದಶಗುಣ ನಮುಚಿ ನೀಚನು,
ನೂರು ಗುಣದಿಂ ಅಧಮ ವಾತಾಪಿ,
ಕುಮತಿ ಧೇನುಕ ನೂರು ಗುಣದಿಂದ ಅಮರರಿಪು ವಾತಾಪಿಗೆ ಅಧಮನು,
ವಮನ ಧೇನುಕಗಿಂದಲಿ ಅರ್ಧ ಗುಣ ಅಧಮನು ಕೇಶಿ ॥ ೧೬ ॥

ಮತ್ತೆ ಕೇಶಿ ನಾಮಕ ತೃಣಾವರ್ತ ಸಮ, ಲವಣ ಅಸುರನು ಒಂಭತ್ತು ನಿಚ,
ಅರಿಷ್ಟ ನಾಮಕ ಪಂಚ ಗುಣದಿಂದ,
ದೈತ್ಯ ಸತ್ತಮ ಹಂಸ ಡಿಭಿಕ ಪ್ರಮತ್ತ–ವೇನನು ಪೌಂಡ್ರಕನು,
ವಂಭತ್ತು ಗುಣದಿಂದ ಅಧಮ ಮೂವರು ಲವಣ ನಾಮಕಗೆ ॥ ೧೭ ॥

ಈಶನೇ ನಾನೆಂಬ ಖಳ ದುಶ್ಯಾಸನಾ ವೃಷಸೇನ ದೈತ್ಯ ಅಗ್ರೇಸರ ಜರಾಸಂಧ ಸಮ
ಪಾಪಿಗಳೊಳು ಅತ್ಯಧಿಕ,
ಕಂಸ ಕೂಪ ವಿಕರ್ಣ ಸರಿ ರುಗ್ಮೀ ಶತ ಅಧಮ,
ರುಗ್ಮಿಗಿಂತ ಮಹಾಸುರನು ಶತಧನ್ವಿ ಕಿರ್ಮೀರರು ಶತ ಅಧಮರು ॥ ೧೮ ॥

ಮದಿರಪಾನೀ ದೈತ್ಯ ಗಣದೊಳಗೆ ಅಧಮರು ಎನಿಪರು ಕಾಲಿಕೇಯರು,
ಅಧಿಕರಿಗೆ ಸಮರು ಅಹರು ದೇವ ಆವೇಶಬಲದಿಂದ,
ವದನ ಪಾಣೀ ಪಾದ ಶ್ರೋತ್ರಿಯ ಗುದ ಉಪಸ್ಥ ಘ್ರಾಣ ತ್ವಕ್ ಮನಕೆ
ಅಧಿ–ಪ ದೈತ್ಯರು ನೀಚರು ಎನಿಪರು ಕಾಲಿಕೇಯರಿಗೆ ॥ ೧೯ ॥

ಜ್ಞಾನ ಕರ್ಮ ಇಂದ್ರಿಯಗಳಿಗೆ ಅಭಿಮಾನಿ ಕಲಿ ಆದಿ ಅಖಿಳ ದೈತ್ಯರು,
ಹೀನ ಕರ್ಮವ ಮಾಡಿ ಮಾಡಿಸುತ ಇಹರು ಸರ್ವರೊಳು,
ವಾಣಿ ಭಾರತಿ ಕಮಲ-ಭವ ಪವಮಾನರು ಇವರು ಅಚ್ಛಿನ್ನ ಭಕ್ತರು,
ಪ್ರಾಣ ಅಸುರ ಆವೇಶ ರಹಿತರು ಆಖನ-ಆಶ್ಮ-ಸಮ ॥ ೨೦ ॥

ಹುತವಹ-ಆಕ್ಷ್ ಆದಿ ಅಮರರು ಎಲ್ಲರು ಯುತರು ಕಲಿ ಆವೇಶ,
ವಿಧಿ ಮಾರುತಿ ಸರಸ್ವತಿ ಭಾರತಿಯ ಅವತಾರ-ದೊಳಗೆ ಇಲ್ಲ,
ಕೃತ-ಪುಟ-ಅಂಜಲಿಯಿಂದ ತನ್ನಯ ಪಿತನ ಸಮ್ಮುಖದಲ್ಲಿ ನಿಂದು ಆನತಿಸಿ,
ಬಿನ್ನೈಸಿದನು ಯನ್ನೊಳು ಕೃಪೆಯ ಮಾಡು ಎಂದು ॥ ೨೧ ॥

ದ್ವೇಷಿ ದೈತ್ಯರ ತಾರತಮ್ಯವು ದೂಷಣೆಯು ಭೂಷಣಗಳು ಎನ್ನದೆ,
ದೋಷವು ಎಂಬುವ ದ್ವೇಷಿ ನಿಶ್ಚಯ,
ಇವರ ನೋಡಲ್ಕೆ ಕ್ಲೇಶಗಳನು ಐದುವನು ಬಹು ವಿಧ,
ಸಂಶಯವು ಪಡ ಸಲ್ಲ, ವೇದ ವ್ಯಾಸ ಗರುಡ ಪುರಾಣದಲ್ಲಿ ಪೇಳಿದನು ಋಷಿಗಳಿಗೆ ॥ ೨೨ ॥

ಜಾಲಿ-ನೆಗ್ಗಿಲು-ಕ್ಷುದ್ರ ಶಿಲೆ ಬರಿ-ಗಾಲ ಪುರುಷನ ಬಾಧಿಪವು,
ಚರ್ಮ್ಮೊಳಿಗೆಯ ಮೆಟ್ಟಿದವಗೆ ಉಂಟೇ ಕಂಟಕಗಳ ಭಯ,
ಚೇಳು ಸರ್ಪವ ಕೊಂದ ವಾರ್ತೆಯ ಕೇಲಿ ಮೋದಿಪರಿಗೆ ಇಲ್ಲವು ಅಘ,
ಯಮನ ಆಳುಗಳ ಭಯವಿಲ್ಲ ದೈತ್ಯರ ನಿಂದಿಸುವ ನರಗೆ ॥ ೨೩ ॥

ಪುಣ್ಯ ಕರ್ಮವ ಪುಷ್ಕರ ಆದಿ ಹಿರಣ್ಯ ಗರ್ಭ ಅಂತರ್ಗತ
ಬ್ರಹ್ಮಣ್ಯ ದೇವನಿಗೆ ಅರ್ಪಿಸುತಲಿರು,
ಪಾಪ ಕರ್ಮಗಳ ಜನ್ಯ ದು:ಖವ ಕಲಿ ಮುಖಾದ್ಯರಿಗೆ ಉಣ್ಣಲು ಈವನು,
ಸಕಲ ಲೋಕ ಶರಣ್ಯ, ಶಾಶ್ವತ, ಮಿಶ್ರ ಜನರಿಗೆ ಮಿಶ್ರ ಫಲವ ಈವ ॥ ೨೪ ॥

ತ್ರಿ-ವಿಧ ಗುಣಗಳ ಮಾನಿ ಶ್ರೀ ಭಾರ್ಗವಿ-ರಮಣ ಗುಣ-ಗುಣಿ-ಗಳೊಳಗೆ
ಅವರ-ಅವರ ಯೋಗ್ಯತೆ ಕರ್ಮಗಳನು ಅನುಸರಿಸಿ ಕರ್ಮ ಫಲ,
ಸ್ವ-ವಶರು ಆದ ಅಮರ-ಅಸುರರ ಗಣಕೆ ಅವಧಿ ಯಿಲ್ಲದೆ ಕೊಡುವ,
ದೇವ-ಪ್ರವರ-ವರ ಜಗನ್ನಾಥ ವಿಠಲ ವಿಶ್ವ-ವ್ಯಾಪಕನು ॥ ೨೫ ॥

॥ ಇತಿ ಶ್ರೀ ದೈತ್ಯತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಶ್ರೀ ನೈವೇದ್ಯಪ್ರಕರಣ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಲೆಕ್ಕಿಸದೆ ಲಕುಮಿಯನು ಬೊಮ್ಮನ ಪೊಕ್ಕಳಿಂದಲಿ ಪಡೆದ,
ಪೊಸ ಪೊಂಬಕ್ಕಿ–ದೇರನು ಪಡೆದ ಅವಯುವಗಳಿಂದ ದಿವಿಜರನಾ,
ಮಕ್ಕಳಂದದಿ ಪೊರೆವ, ಸರ್ವ–ದ, ರಕ್ಕಸ–ಅಂತಕ,
ರಣದೊಳಗೆ ನಿರ್ದು:ಖ ಸುಖಮಯ ಕಾಯ್ದ ಪಾರ್ಥನ ಸೂತನು ಎಂದೆನಿಸಿ ॥ ೧ ॥

ದೋಷ ಗಂಧ ವಿದೂರ, ನಾನಾ ವೇಷ ಧಾರಿ, ವಿಚಿತ್ರ ಕರ್ಮ,
ಮನೀಷಿ, ಮಾಯಾ ರಮಣ, ಮಧ್ವ–ಅಂತ: ಕರಣ ರೂಢ,
ಶೇಷ ಶಾಯಿ, ಶರಣ್ಯ, ಕೌಸ್ತುಭ ಭೂಷಣ ಸು–ಕಂಧರ,
ಸದಾ ಸಂತೋಷ ಬಲ ಸೌಂದರ್ಯ ಸಾರನ ಮಹಿಮೆಗೆ ಏನೆಂಬೆ ॥ ೨ ॥

"ಸಾಶನಾನ–ಶನೇ–ಅಭೀ" ಯೆಂಬ ಈ ಶ್ರುತಿ ಪ್ರತಿಪಾದ್ಯನು ಎನಿಸುವ
ಕೇಶವನ ರೂಪ ದ್ವಯುವ ಚಿದ್–ದೇಹದ ಒಳ–ಹೊರಗೆ
ಬೇಸರದೆ ಸದ್–ಭಕ್ತಿ–ಯಿಂದ ಉಪಾಸನೆಯ ಗೈಯುತಲಿ ಬುಧರು,
ಹುತಾಶನನ ಯೋಲ್ ಇಪ್ಪನು ಎಂದು ಅನವರತ ತುತಿಸುವರು ॥ ೩ ॥

ಸಕಲ ಸದ್ಗುಣ ಪೂರ್ಣ, ಜನ್ಮ ಆದಿ ಅಖಿಳ ದೋಷ ವಿದೂರ,
ಪ್ರಕಟ–ಅಪ್ರಕಟ, ಸದ್–ವ್ಯಾಪಾರಿ, ಗತ ಸಂಸಾರಿ, ಕಂಸಾರಿ,
ನಕುಲ, ನಾನಾ ರೂಪ ನೀಯಾಮಕ, ನಿಯಮ್ಯ, ನಿರಾಮಯ,
ರವಿ ಪ್ರಕರ ಸನ್ನಿಭ, ಪ್ರಭು, ಸದಾ ಮಾಂ ಪಾಹಿ ಪರಮ–ಆತ್ಮ ॥ ೪ ॥

ಚೇತನ–ಅಚೇತನ ಜಗತ್ತಿನೊಳು ಆತನನು ತಾನು ಆಗಿ
ಲಕ್ಷ್ಮೀ–ನಾಥ ಸರ್ವರೊಳು ಇಪ್ಪ ತತ್–ತದ್–ರೂಪಗಳ ಧರಿಸಿ,
ಜಾತಿ ಕಾರನ ತೆರದಿ ಯೆಲ್ಲರ ಮಾತಿನೊಳಗೆ ಇದ್ದು,
ಅಖಿಳ ಕರ್ಮವ ತಾ ತಿಳಿಸಿ ಕೊಳ್ಳದಲೆ ಮಾಡಿಸಿ ನೋಡಿ ನಗುತ ಇಪ್ಪ ॥ ೫ ॥

ವೀತಭಯ, ವಿಜ್ಞಾನ ದಾಯಕ, ಭೂತ ಭವ್ಯ ಭವತ್ ಪ್ರಭು,
ಖಳಾರಾತಿ, ಖಗ ವರ ವಹನ, ಕಮಲಾ–ಕಾಂತ, ನಿಶ್ಚಿಂತ,
ಮಾತರಿಶ್ವ ಪ್ರಿಯ, ಪುರಾತನ, ಪೂತನಾ ಪ್ರಾಣ ಅಪಹಾರಿ,
ವಿಧಾತೃ ಜನಕ, ವಿಪಶ್ಚಿತ ಜನ ಪ್ರಿಯ, ಕವಿಗೇಯಾ ॥ ೬ ॥

ದುಷ್ಟ ಜನ ಸಂಹಾರಿ, ಸರ್ವ ಉತ್ಕೃಷ್ಟ ಮಹಿಮ, ಸಮೀರ ನುತ,
ಸಕಲ ಇಷ್ಟ ದಾಯಕ, ಸ್ವರತ, ಸುಖ ಮಯ, ಮಮ ಕುಲ ಸ್ವಾಮಿ,
ಹೃಷ್ಟ–ಪುಷ್ಟ–ಕನಿಷ್ಠ, ಸೃಷ್ಟಿ ಆದಿ ಅಷ್ಟ ಕರ್ತ, ಕರಿ–ಇಂದ್ರ ವರದ,
ಯಥೇಷ್ಟ ತನು, ಉನ್ನತ ಸುಕರ್ಮಾ, ನಮಿಪೆನು ಅನವರತ ॥ ೭ ॥

ಪಾಕಶಾಸನ ಪೂಜ್ಯ ಚರಣ, ಪಿನಾಕಿ ಸನ್ನುತ ಮಹಿಮ,
ಸೀತಾ ಶೋಕ ನಾಶನ, ಸುಲಭ, ಸುಮುಖ, ಸುವರ್ಣ ವರ್ಣ ಸುಖಿ,
ಮಾಕಳತ್ರ, ಮನೀಷಿ, ಮಧು ರಿಪು, ಏಕಮೇವ–ಅದ್ವಿತಿಯ ರೂಪ,
ಪ್ರತೀಕ, ದೇವ ಗಣ–ಅಂತರ–ಆತ್ಮಕ, ಪಾಲಿಸುವುದು ಎಮ್ಮ ॥ ೮ ॥

ಅಪ್ರಮೇಯ, ಅನಂತ ರೂಪ, ಸದಾ ಪ್ರಸನ್ನ ಮುಖ ಅಬ್ಜ,
ಮುಕ್ತಿ ಸುಖ ಪ್ರದಾಯಕ, ಸುಮನಸ ಆರಾಧಿತ ಪದ ಅಂಭೋಜ,
ಸ್ವ–ಪ್ರಕಾಶ, ಸ್ವತಂತ್ರ, ಸರ್ವಗ, ಕ್ಷಿಪ್ರ ಫಲ ದಾಯಕ, ಕ್ಷಿತಿ ಈಶ,
ಯದು ಪ್ರವೀರ, ವಿತರ್ಕ್ಯ, ವಿಶ್ವ–ಸು ತೈಜಸ–ಪ್ರಾಜ್ಞ ॥ ೯ ॥

ಗಾಳಿ ನಡೆವಂದದಲಿ ನೀಲ ಘನಾಳಿ ವರ್ತಿಸುವಂತೆ,
ಬ್ರಹ್ಮ ತ್ರಿ–ಶೂಲ–ಧರ ಶಕ್ರ ಅರ್ಕ ಮೊದಲಾದ ಅಖಿಳ ದೇವ ಗಣ,
ಕಾಲ ಕರ್ಮ ಗುಣ ಅಭಿಮಾನಿ ಮಹಾ ಲಕುಮಿ ಅನುಸರಿಸಿ ನಡೆವರು,
ಮೂಲ ಕಾರಣ ಮುಕ್ತಿ ದಾಯಕನು ಶ್ರೀಹರಿ ಯೆನಿಸಿಕೊಂಬ ॥ ೧೦ ॥

ಮೋಡ ಕೈ ಬೀಸಣಿಕೆ ಯಿಂದಲಿ ಓಡಿಸುವೆನು ಎಂಬನ ಪ್ರಯತ್ನವು,
ಕೂಡುವದೆ ಕಲ್ಪ–ಅಂತಕೆ ಆದರು, ಲಕುಮಿ ವಲ್ಲಭನು ಜೋಡು ಕರ್ಮವ ಜೀವರೊಳು,
ತಾ ಮಾಡಿ ಮಾಡಿಸಿ ಫಲಗಳ ಉಣಿಸುವ,
ಪ್ರೌಢರಾದವರು ಇವನ ಭಜಿಸಿ ಭವ–ಅಬ್ಧಿ ದಾಟುವರು ॥ ೧೧ ॥

ಕ್ಲೇಶ–ಮೋಹ–ಅಜ್ಞಾನ–ದೋಷ ವಿನಾಶಕ, ವಿರಿಂಚಿ–ಅಂಡದೊಳಗೆ
ಆಕಾಶದ ಉಪಾದಿಯಲಿ ತುಂಬಿಹ ಯೆಲ್ಲ ಕಾಲದಲಿ,
ಘಾಸಿಗೊಳಿಸದೆ ತನ್ನವರ ಅನಾಯಾಸ ಸಂರಕ್ಷಿಸುವ,
ಮಹ ಕರುಣಾ ಸಮುದ್ರ, ಪ್ರಸನ್ನ ವದನ ಅಂಭೋಜ, ಸುರ ರಾಜ, ವೈರಾಜ ॥ ೧೨ ॥

ಕನ್ನಡಿಯ ಕೈವಿಡಿದು ನೋಳ್ಪನ ಕಣ್ಣುಗಳು ಕಂಡಲ್ಲಿಗೆ ಎರಗದೆ,
ತನ್ನ ಪ್ರತಿ-ಬಿಂಬವನೆ ಕಾಂಬುವ ದರ್ಪಣವ ಬಿಟ್ಟು,
ಧನ್ಯರು ಇಳೆಯೊಳಗೆ ಎಲ್ಲ ಕಡೆಯಲಿ ನಿನ್ನ ರೂಪವ ನೋಡಿ ಸುಖಿಸುತ
ಸನ್ನುತಿಸುತ ಆನಂದ ವಾರಿಧಿ-ಯೊಳಗೆ ಮುಳುಗಿಹರು ॥ ೧೩ ॥

ಅನ್ನ ಮಾನಿ ಶಶಾಂಕನೊಳು ಕಾರುಣ್ಯ ಸಾಗರ ಕೇಶವನು,
ಪರಮಾನ್ನದೊಳು ಭಾರತಿಯು ನಾರಾಯಣನು,
ಭಕ್ಷ್ಯದೊಳು ಸೊನ್ನಗದಿರನು ಮಾಧವನು,
ಶ್ರುತಿ ಸನ್ನುತ ಶ್ರೀಲಕ್ಷ್ಮಿ ಘೃತದೊಳು ಮಾನ್ಯ ಗೋವಿಂದ ಅಭಿಧನು ಇರುತಿಪ್ಪ ಯೆಂದೆಂದು ॥ ೧೪ ॥

ಕ್ಷೀರ ಮಾನಿ ಸರಸ್ವತೀ ಜಗತ್-ಸಾರ ವಿಷ್ಣುವ ಚಿಂತಿಸುವುದು,
ಸರೋರುಹ ಆಸನ ಮಂಡಿಗೆಯೊಳು ಇರುತ ಇಪ್ಪ ಮಧು ವೈರಿ,
ಮಾರುತನು ನವನೀತದೊಳು ಸಂ-ಪ್ರೇರಕ ತ್ರಿವಿಕ್ರಮನು,
ದಧಿಯೊಳು ವಾರಿನಿಧಿ ಚಂದ್ರಮರೊಳಗೆ ಇರುತ ಇಪ್ಪ ವಾಮನನು ॥ ೧೫ ॥

ಗರುಡ ಸೂಪಕೆ ಮಾನಿ ಶ್ರೀ ಶ್ರೀಧರನ ಮೂರುತಿ,
ಪತ್ರ ಶಾಖಕೆ ವರನು ಎನಿಪ ಮಿತ್ರ ಆಖ್ಯ ಸೂರ್ಯನು ಹೃಶೀಕಪನ ಮೂರ್ತಿ,
ಉರಗ ರಾಜನು ಫಲ ಸುಶಾಖಕೆ ವರನು ಎನಿಸುವನು
ಪದ್ಮ-ನಾಭನ ಸ್ಮರಿಸಿ ಭುಂಜಿಸುತಿಹರು ಬಲ್ಲವರು ಎಲ್ಲ ಕಾಲದಲಿ ॥ ೧೬ ॥

ಗೌರಿ ಸರ್ವ ಆಮ್ಲಸ್ಥಳು ಎನಿಪಳು ಶೌರಿ ದಾಮೋದರನ ತಿಳಿವುದು,
ಗೌರಿ-ಪ ಅನಾಮ್ಲಸ್ಥ ಸಂಕರುಷಣನ ಚಿಂತಿಪುದು,
ಸಾರ ಶರ್ಕರ ಗುಡದೊಳಗೆ ವೃತ್ರ-ಆರಿ ಇರುತಿಹ
ವಾಸುದೇವನ ಸೂರಿಗಳು ಧೇನಿಪರು ಪರಮ ಆದರದಿ ಸರ್ವತ್ರ ॥ ೧೭ ॥

ಸ್ಮರಿಸು ವಾಚಸ್ಪತಿಯ ಸೂಪಸ್ಕರದೊಳಗೆ ಪ್ರದ್ಯುಮ್ನನು ಇಪ್ಪನು,
ನಿರಯ-ಪತಿ ಯಮಧರ್ಮ ಕಟು ದ್ರವ್ಯದೊಳಗೆ ಅನಿರುದ್ಧ,
ಸರಷಪ-ಶ್ರೀ ರಾಮಠ-ಏಳದಿ ಸ್ಮರಣ ಶ್ರೀ ಪುರುಷ-ಉತ್ತಮನ
ಕರ್ಪೂರದಿ ಚಿಂತಿಸಿ ಪೂಜಿಸುತಲಿರು ಪರಮ ಭಕುತಿಯಲಿ ॥ ೧೮ ॥

ನಾಲಿಗಿಂದಲಿ ಸ್ವೀಕರಿಪ ರಸಪಾಲು ಮೊದಲಾದ ಅದರೊಳಗೆ
ಘೃತ ತೈಲ ಪಕ್ವ ಪದಾರ್ಥದೊಳಗಿಹ ಚಂದ್ರ ನಂದನನ
ಪಾಲಿಸುವ ಅಧೋಕ್ಷಜನ ಚಿಂತಿಸು,
ಸ್ಥೂಲ ಕೂಷ್ಮಾಂಡ ತಿಲ ಮಾಷ-ಜ ಈ ಲಲಿತ ಭಕ್ಷ್ಯದೊಳು ದಕ್ಷನು ಲಕ್ಷ್ಮೀ-ನರಸಿಂಹ ॥ ೧೯ ॥

ಮನವು ಮಾಷ ಸುಭಕ್ಷ್ಯದೊಳು ಚಿಂತನೆಯು ಮಾಡು ಅಚ್ಯುತನ,
ನಿರಋತಿ ಮನೆ ಯೆನಿಪ ಲವಣದೊಳು ಮರೆಯದೆ ಶ್ರೀ ಜನ-ಅರ್ದನನ,
ನೆನೆವುತಿರು ಫಲ ರಸಗಳೊಳು ಪ್ರಾಣನ ಉಪೇಂದ್ರನ,
ವೀಳ್ಯದ-ಎಲೆಯೊಳು ದ್ಯುನದಿ ಹರಿ ರೂಪವನೆ ಕೊಂಡಾಡುತಲೆ ಸುಖಿಸುತಿರು ॥ ೨೦ ॥

ವೇದ ವಿನುತಗೆ ಬುಧನು ಸು-ಸ್ವಾದ ಉದಕ ಅಧಿಪನು ಎನಿಸಿಕೊಂಬನು
ಶ್ರೀದ ಕೃಷ್ಣನ ತಿಳಿದು ಪೂಜಿಸುತಿರು ನಿರಂತರದಿ,
ಸಾಧು ಕರ್ಮವ ಪುಷ್ಕರನು ಸು-ನಿವೇದಿತ ಪದಾರ್ಥಗಳ
ಶುದ್ಧಿಯು ಗೈದ ಗೋಸುಗ ಹಂಸ ನಾಮಕಗೆ ಅರ್ಪಿಸುತಲಿ ಇಪ್ಪ ॥ ೨೧ ॥

ರತಿ ಸಕಲ ಸುಸ್ವಾದು ರಸಗಳ ಪತಿ ಯೆನಿಸುವಳು ಅಲ್ಲಿ ವಿಶ್ವನು,
ಹುತ ವಹನ ಚೂಲಿಗಳೊಳಗೆ ಭಾರ್ಗವನ ಚಿಂತಿಪುದು,
"ಕ್ಷಿತಿ ಜ"-"ಗೋಮಯ ಜ" ಆದಿಯೊಳು ಸಂಸ್ಥಿತ ವಸಂತನ ಋಷಭ ದೇವನ,
ತುತಿಸುತಿರು ಸಂತತ ಸದ್-ಭಕ್ತಿ ಪೂರ್ವಕದಿ ॥ ೨೨ ॥

ಪಾಕ ಕರ್ತೃಗಳೊಳು ಚತುರ್-ದಶ ಲೋಕಮಾತೆ ಮಹಾ ಲಕುಮಿ
ಗತ-ಶೋಕ ವಿಶ್ವಂಭರನ ಚಿಂತಿಪುದು ಎಲ್ಲ ಕಾಲದಲಿ,
ಚೌಕ ಶುದ್ಧ ಸುಮಂಡಲದಿ ಭೂ ಸೂಕರ ಆಹ್ವಯು,
ಉಪರಿ ಚೈಲಪ ಏಕದಂತ ಸನತ್-ಕುಮಾರನ ಧ್ಯಾನಿಪುದು ಬುಧರು ॥ ೨೩ ॥

ಶ್ರೀನಿವಾಸನ ಭೋಗ್ಯ-ವಸ್ತುವ ಕಾಣ-ಗೊಡ-ದಂದದಲಿ
ವಿಷ್ವಕ್ಸೇನ ಪರಿಖಾ ರೂಪ ನಾಗಿಹನು ಅಲ್ಲಿ ಪುರುಷ ಆಖ್ಯ,
ತಾನೆ ಪೂಜಕ ಪೂಜ್ಯನು ಎನಿಸಿ ನಿಜ ಅನುಗರ ಸಂತೈಪ,
ಗುರು ಪವಮಾನ ವಂದಿತ, ಸರ್ವ ಕಾಲಗಳಲ್ಲಿ ಸರ್ವತ್ರ ॥ ೨೪ ॥

ನೂತನ-ಸಮೀಚೀನ-ಸುರಸೋಪೇತ-ಹೃದ್ಯ ಪದಾರ್ಥದೊಳು,
ವಿಧಿ-ಮಾತೆ ತತ್-ತದ್-ರಸ-ಗಳೊಳು ರಸ ರೂಪ ತಾನು ಆಗಿ,
ಪ್ರೀತಿ ಬಡಿಸುತ ನಿತ್ಯದಿ ಜಗನ್ನಾಥ ವಿಠಲನ ಕೂಡಿ,
ತಾ ನಿರ್ಭೀತಳು ಆಗಿಹಳು ಎಂದು ಅರಿದು ನೀ ಭಜಿಸಿ ಸುಖಿಸುತಿರು ॥ ೨೫ ॥

॥ ಶ್ರೀ ನೈವೇದ್ಯಪ್ರಕರಣ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

## ॥ ಶ್ರೀ ಕಕ್ಷಾತಾರತಮ್ಯ ಸಂಧಿ ॥

ಹರಿಕಥ–ಅಮೃತ–ಸಾರ, ಗುರುಗಳ ಕರುಣದಿಂದ–ಆಪನಿತು ಪೇಳುವೆ,
ಪರಮ ಭಗವದ್ಭಕ್ತರು, ಇದನ ಆದರದಿ ಕೇಳುವುದು ॥

ಶ್ರೀ–ರಮಣ, ಸರ್ವ ಈಶ, ಸರ್ವ–ಗ, ಸಾರ ಭೋಕ್ತ, ಸ್ವ–ತಂತ್ರ,
ದೋಷ ವಿದೂರ, ಜ್ಞಾನ–ಆನಂದ–ಬಲ–ಐಶ್ವರ್ಯ–ಸುಖ ಪೂರ್ಣ,
ಮೂರು ಗುಣ ವರ್ಜಿತ, ಸಗುಣ, ಸಾಕಾರ, ವಿಶ್ವ–ಸ್ಥಿತಿ–ಲಯ–ಉದಯ ಕಾರಣ,
ಕೃಪಾ ಸಾಂದ್ರ, ನರಹರೆ, ಸಲಹೊ ಸಜ್ಜನರ ॥ ೧ ॥

ನಿತ್ಯ ಮುಕ್ತಳೆ, ನಿರ್–ವಿಕಾರಳೆ, ನಿತ್ಯ ಸುಖ ಸಂಪೂರ್ಣೆ,
ನಿತ್ಯ–ಅನಿತ್ಯ ಜಗದ ಆಧಾರೆ, ಮುಕ್ತ–ಅಮುಕ್ತ ಗಣ ವಿನುತೆ,
ಚಿತ್ತಯಿಸು ಬಿನ್ನಪವ, ಶ್ರೀ–ಪುರುಷ–ಉತ್ತಮನ ವಕ್ಷೋ–ನಿವಾಸಿನಿ,
ಭೃತ್ಯ ವರ್ಗವ ಕಾಯೆ, ತ್ರಿ–ಜಗನ್–ಮಾತೆ, ವಿಖ್ಯಾತೆ ॥ ೨ ॥

ರೋಮ ಕೂಪಗಳಲ್ಲಿ ಪೃತ್–ಪೃಥಕ್ ಆ ಮಹಾ ಪುರುಷನ
ಸ್ವಮೂರ್ತಿ ತಾಮರಸ–ಜ–ಅಂಡಗಳ ತದ್–ಗತ ವಿಶ್ವ ರೂಪಗಳ,
ಶ್ರೀ ಮಹಿಳೆ ರೂಪಗಳ, ಗುಣಗಳ, ಸೀಮೆ ಗಾಣದೆ ಯೋಚಿಸುತ,
ಮಮ ಸ್ವಾಮಿ ಮಹಿಮೆ ಯದು ಎಂತೊ ಯೆಂದು ಅಡಿಗೆ–ಅಡಿಗೆ ಬೆರಗಾದೆ ॥ ೩ ॥

ಒಂದು ಅಜ ಅಂಡದೊಳು, ಒಂದು ರೂಪದೊಳು, ಒಂದು ಅವಯವದೊಳು ಒಂದು ನಖದೊಳಗೆ
ಒಂದು ಗುಣಗಳ ಪಾರು ಗಾಣದೆ, ಕೃತ ಪುಟಾಂಜಲಿಯಿಂ,
ಮಂದ–ಜ–ಆಸನ, ಪುಳಕ ಪುಳಕ ಆನಂದ ಬಾಷ್ಪ ತೊದಲು ನುಡಿಗಳಿಂದ,
ಇಂದಿರಾ ವಲ್ಲಭನ ಮಹಿಮೆ ಗಭೀರ–ತೆರವೆಂದ ॥ ೪ ॥

ಏನು ಧನ್ಯರೊ ಬ್ರಹ್ಮ–"ಗುರು ಪವಮಾನ" ರಾಯರು,
ಈ ಪರಿಯಲಿ ರಮಾ–ನಿವಾಸನ ವಿಮಲ ಲಾವಣ್ಯ ಅತಿಶಯಗಳನು,
ಸಾನುರಾಗದಿ ನೋಡಿ ಸುಖಿಪ ಮಹಾನುಭಾವರ ಭಾಗ್ಯವೆಂತೊ,
ಭವಾನಿ–ಧವನಿಗೆ ಅಸಾಧ್ಯವು ಎನಿಸಲು, ನರರ ಪಾಡೇನು ॥ ೫ ॥

ಆ ಪಿತಾಮಹ ನೂರು ಕಲ್ಪ ರಮಾ ಪತಿಯ ಗುಣ ಜಪಿಸಿ-ಒಲಿಸಿ,
ಮಹಾ ಪರಾಕ್ರಮ ಹನುಮ ಭೀಮ ಆನಂದ ಮುನಿ ಯೆನಿಸಿ,
ಆ ಪರ ಬ್ರಹ್ಮನ ಸುನಾಭೀ ಕೂಪ ಸಂಭವ ನಾಮದಲಿ ಮೆರೆವ,
ಆ "ಪಯೋಜ ಆಸನ"-ಸಮೀರರಿಗೆ ಅಭಿನಮಿಪೆ ಸತತ ॥ ೬ ॥

ವಾಸುದೇವನ ಮೂರ್ತಿ ಹೃದಯ ಆಕಾಶ ಮಂಡಲ ಮಧ್ಯದಲಿ,
ತಾರೇಶನಂದದಿ ಕಾಣುತ ಅತಿ ಸಂತೋಷದಲಿ ತುತಿಪ,
ಆ ಸರಸ್ವತಿ ಭಾರತಿಯರಿಗೆ ನಾ ಸತತ ವಂದಿಸುವೆ,
ಪರಮ-ಉಲ್ಲಾಸದಲಿ ಸುಜ್ಞಾನ ಭಕುತಿಯ ಸಲಿಸಲಿ ಎಮಗೆ ಎಂದು ॥ ೭ ॥

ಜಗದ-ಉದರನ ಸುರ-ಉತ್ತಮನ ನಿಜಪೆಗಳೊಳಾಂತು ಕರ-ಅಬ್ಜದೊಳು ಪದ ಯುಗ ಧರಿಸಿ,
ನಖ ಪಂಕ್ತಿಯೊಳು ರಮಣೀಯ ತರವಾದ ನಗ-ಧರನ ಪ್ರತಿಬಿಂಬ ಕಾಣುತ,
ಮಿಗೆ ಹರುಷದಿಂ ಪೊಗಳಿ ಹಿಗ್ಗುವ ಖಗ ಕುಲ ಅಧಿಪ,
ಕೊಡಲಿ ಮಂಗಳ ಸರ್ವ ಸುಜನರಿಗೆ ॥ ೮ ॥

ಯೋಗಿಗಳ ಹೃದಯಕೆ ನಿಲುಕ ನಿಗಮ-ಆಗಮೈಕ ವಿನುತನ,
ಪರಮ ಅನುರಾಗದಲಿ ದ್ವಿ-ಸಹಸ್ರ ಜಿಹ್ವೆಗಳಿಂದ ವರ್ಣಿಸುವ,
ಭೂ-ಗಗನ-ಪಾತಾಳ ವ್ಯಾಪ್ತನ, ಯೋಗ ನಿದ್ರ-ಆಸ್ಪದನು ಎನಿಪ,
ಗುರು ನಾಗರಾಜನ ಪದಕೆ ನಮಿಸುವೆ ಮನದೊಳು ಅನವರತ ॥ ೯ ॥

ದಕ್ಷ ಯಜ್ಞ ವಿಭಂಜನನೆ, ವಿರುಪಾಕ್ಷ, ವೈರಾಗ್ಯ ಅಧಿಪತಿ,
ಸಂರಕ್ಷಿಸು ಎಮ್ಮನು, ಸರ್ವ ಕಾಲದಿ ಸನ್-ಮುದವನು ಇತ್ತು,
ಯಕ್ಷ-ಪತಿ ಸಖ, ಯಜಪರಿಗೆ ಸುರ ವೃಕ್ಷ, ವೃಕದ-ಅನುಜ-ಆರಿ,
ಲೋಕ ಅಧ್ಯಕ್ಷ, ಶುಕ-ದೂರ್ವಾಸ-ಜೈಗೀಷವ್ಯ ಸಂತೈಸು ॥ ೧೦ ॥

ನಂದಿ ವಾಹನ, ನಳಿನಿ ಧರ, ಮೌಳಿ ಇಂದು ಶೇಖರ, ಶಿವ, ತ್ರಿ-ಯಂಬಕ,
ಅಂಧಕ ಅಸುರ ಮಥನ, ಗಜ ಶಾರ್ದೂಲ ಚರ್ಮಧರ,
ಮಂದಜ-ಆಸನ ತನಯ, ತ್ರಿ-ಜಗದ್-ವಂದ್ಯ, ಶುದ್ಧ ಸ್ಫಟಿಕ ಸನ್ನಿಭ,
ವಂದಿಸುವೆನು ಅನವರತ ಕರುಣಿಸಿ ಕಾಯೊ ಮಹದೇವ ॥ ೧೧ ॥

ಹತ್ತು ಕಲ್ಪದಿ ಲವಣ ಜಲಧಿಯೊಳು ಉತ್ತಮ ಶ್ಲೋಕನ ವೊಲಿಸಿ,
ಕೃತ-ಕೃತ್ಯನು ಆಗಿ, ಜಗತ್ ಪತಿಯ ನೇಮದಿ ಕು-ಶಾಸ್ತ್ರಗಳ ಬಿತ್ತರಿಸಿ ವೋಹಿಸಿ,
ದುರಾತ್ಮರ ನಿತ್ಯ ನಿರಯ ನಿವಾಸರು ಎನಿಸಿದ,
ಕೃತ್ತಿ ವಾಸನೆ ನಮಿಪೆ, ಪಾಲಿಸೊ ಪಾರ್ವತೀ ರಮಣ ॥ ೧೨ ॥

ಫಣಿ ಫಣಾಂಚಿತ, ಮಕುಟ ರಂಜಿತ, ಕ್ವಣಿತ ಡಮರು, ತ್ರಿಶೂಲ,
ಶಿಖಿ-ದಿನ ಮಣಿ-ನಿಶಾಕರ ನೇತ್ರ, ಪರಮ ಪವಿತ್ರ, ಸು-ಚರಿತ್ರ,
ಪ್ರಣತ ಕಾಮದ, ಪ್ರಮಥ, ಸುರ-ಮುನಿ ಗಣ ಸುಪೂಜಿತ ಚರಣ ಯುಗ,
ರಾವಣ ಮದ ವಿಭಂಜನ, ಶೇಷ ಪದ ಅರ್ಹನು ಅಹುದು ಎಂದು ॥ ೧೩ ॥

ಕಂಬು-ಪಾಣಿಯ ಪರಮ ಪ್ರೇಮ ನಿತಂಬಿನಿಯರು ಎಂದು ಎನಿಪ,
ಲಕ್ಷಣೆ-ಜಾಂಬವತಿ-ಕಾಳಿಂದಿ-ನೀಲಾ-ಭದ್ರ-ಸಖ ವಿಂದಾರು ಎಂಬ
ಷಣ್-ಮಹಿಷಿಯರ ದಿವ್ಯ ಪದ-ಅಂಬು-ಜ-ಗಳಿಗೆ ನಮಿಪೆ,
ಮಮ ಹೃದಯ-ಅಂಬರದಿ ನೆಲೆಸಲಿ ಬಿಡದೆ ತಮ್ಮ ಅರಸನ ಒಡಗೂಡಿ ॥ ೧೪ ॥

ಆ ಪರಂತಪನ ಒಲುಮೆ ಯಿಂದ ಸದಾ ಅಪರೋಕ್ಷಿಗಳು ಎನಿಸಿ,
ಭಗವದ್-ರೂಪ-ಗುಣಗಳ ಮಹಿಮೆ ಸ್ವ-ಪತಿಗಳ ಆನನದಿ ತಿಳಿವ,
ಸೌಪರಣಿ-ವಾರುಣಿ-"ನಗ ಆತ್ಮಜ"ರ ಆಪನಿತು ಬಣ್ಣಿಸುವೆ,
ಎನ್ನ ಮಹ-ಅಪರಾಧಗಳ ಎಣಿಸದೆ ಈಯಲಿ ಪರಮ ಮಂಗಳವ ॥ ೧೫ ॥

ತ್ರಿ ದಿವತರು-ಮಣಿ-ಧೇನುಗಳಿಗೆ ಆಸ್ಪದನು ಎನಿಪ, ತ್ರಿದಶ ಆಲಯ ಅಬ್ಧಿಗೆ
ಬದರನ-ಅಂದದಲಿ ಒಪ್ಪುತ ಇಪ್ಪ ಉಪೇಂದ್ರ ಚಂದ್ರಮನ,
ಮೃದು ಮಧುರ ಸುಸ್ತವನ-ದಿಂದಲಿ ಮಧು ಸಮಯ ಪಿಕನಂತೆ ಪಾಡುವ,
ಮುದಿರ ವಾಹನನ ಅಂಘ್ರಿ ಯುಗ್ಮಂಗಳಿಗೆ ನಮಿಸುವೆನು ॥ ೧೬ ॥

ಕೃತಿ ರಮಣ ಪ್ರದ್ಯುಮ್ನ ದೇವನ, ಅತುಳ ಬಲ-ಲಾವಣ್ಯ-ಗುಣ ಸಂತತ ಉಪಾಸನ
ಕೇತು ಮಾಲಾ ಖಂಡದೊಳು ರಚಿಪ,
ರತಿ ಮನೋಹರನ ಅಂಘ್ರಿ ಕಮಲಕೆ ನತಿಸುವೆನು ಭಕುತಿಯಲಿ,
ಮಮ ದುರ್ಮತಿ ಕಳೆದು ಸನ್ಮತಿಯನು ಈಯಲಿ ನಿರುತ ಎಮಗೆ ಒಲಿದು ॥ ೧೭ ॥

ಚಾರುತರ ನವ ವಿಧ ಭಕುತಿ ಗಂಭೀರ ವಾರಾಶಿಯೊಳು,
ಪರಮ-ಉದಾರ ಮಹಿಮನ ಹೃದಯ ಫಣಿಪತಿ ಪೀಠದಲಿ ಭಜಿಪ,
ಭೂರಿ ಕರ್ಮಾಕರನು ಎನಿಸುವ, ಶರೀರ-ಮಾನಿ ಪ್ರಾಣ-ಪತಿ ಪದ ವಾರಿರುಹಕೆ ಆನಮಿಪೆ
ಮದ್-ಗುರುರಾಯನು ಅಹುದು ಎಂದು ॥ ೧೮ ॥

ವಿತತ ಮಹಿಮನ, ವಿಶ್ವತೋ ಮುಖನ, ಅತುಳ ಭುಜ ಬಲ ಕಲ್ಪ ತರುವು
ಆಶ್ರಿತರು ಎನಿಸಿ, ಸಕಲ-ಇಷ್ಟ ಪಡೆದು ಅನುದಿನದಿ ಮೋದಿಸುವ,
ರತಿ-ಸ್ವಯಂಭುವ-ದಕ್ಷ-ವಾಚಸ್ಪತಿ-ಬಿಡೌಜನ ಮಡದಿ ಶಚಿ-
"ಮನ್ಮಥ ಕುಮಾರ ಅನಿರುದ್ಧ"ರು ಎಮಗೆ ಈಯಲಿ ಸುಮಂಗಳವ ॥ ೧೯ ॥

ಭವ-ವನಧಿ ನವ-ಪೋತ ಪುಣ್ಯ ಶ್ರವಣ ಕೀರ್ತನ ಪಾದ-ವನರುಹ
ಭವ-ನ ನಾವಿಕನು ಆಗಿ ಭಕುತರ ತಾರಿಸುವ ಬಿಡದೆ,
ಪ್ರವಹ ಮಾರುತ ದೇವ, ಪರಮ-ಉತ್ಸವ ವಿಶೇಷ ನಿರಂತರ,
ಮಹಾ ಪ್ರವಹದಂದದಿ ಕೊಡಲಿ, ಭಗವದ್-ಭಕ್ತ ಸಂತತಿಗೆ ॥ ೨೦ ॥

ಜನರನು ಉದ್ಧರಿಸುವೆನು ಎನುತ ನಿಜ ಜನಕನ ಅನುಮತದಲಿ
ಸ್ವಯಂಭುವ ಮನುವಿನಿಂದಲಿ ಪಡೆದೆ ಸುಕುಮಾರಕರನು ಒಲುಮೆಯಲಿ,
ಜನನಿ ಶತ ರೂಪಾ ನಿತಂಬಿನಿ, ಮನ-ವಚನ-ಕಾಯದಲಿ ತಿಳಿದು
ಅನುದಿನದಿ ನಮಿಸುವೆ, ಕೊಡು ಎಮಗೆ ಸನ್-ಮಂಗಳವನು ಒಲಿದು ॥ ೨೧ ॥

ನರನ-ನಾರಾಯಣನ-ಹರಿ-ಕೃಷ್ಣರ ಪಡೆದೆ ಪುರುಷ-ಅರ್ಥ ತೆರದಲಿ,
ತರಣಿ-ಶಶಿ-ಶತ ರೂಪರಿಗೆ ಸಮನು ಎನಿಸಿ,
ಪಾಪಿಗಳ ನಿರಯದೊಳು ನೆಲೆ-ಗೊಳಿಸಿ, ಸಜ್ಜನ ನೆರವಿಯನು ಪಾಲಿಸುವ,
ಔದುಂಬರ ಸಲಹು ಸಲಹೆಮ್ಮ, ಬಿಡದಲೆ ಪರಮ ಕರುಣದಲಿ ॥ ೨೨ ॥

ಮಧು ವಿರೋಧಿ ಮನೋಜ, ಕ್ಷೀರ-ಉದಧಿ ಮಥನ ಸಮಯದಲಿ ಉದಿಸಿ,
ನೆರೆ ಕು-ಧರ-ಜಾ ವಲ್ಲಭನ ಮಸ್ತಕ ಮಂದಿರದಿ ಮೆರೆವ ವಿಧು,
ತವ-ಅಂಘ್ರಿ ಸರೋಜ ಯುಗಳಕೆ, ಮಧುಪನ ಅಂದದಲಿ ಎರಗಲು ಎನ್ಮನದ ಅಧಿಪ,
ವಂದಿಪೆನು ಅನುದಿನ ಅಂತಸ್-ತಾಪ ಪರಿಹರಿಸು ॥ ೨೩ ॥

ಶ್ರೀ-ವನರುಹ-ಅಂಬಕನ ನೇತ್ರಗಳೇ ಮನೆ ಯೆನಿಸಿ,
ಸಜ್ಜನರಿಗೆ ಕರಾವಲಂಬನ ವೀವ ತೆರದಿ ಮಯೂಖ ವಿಸ್ತರಿಪ,
ಆ ವಿವಸ್ವಾನ್ ನೆನಿಸಿ-ಕೊಂಬ ವಿಭಾವಸು,
ಅಹರ್-ನಿಶಿಗಳಲಿ ಕೊಡಲೀ ವಸುಂಧರೆಯೊಳು ವಿಪಶ್ಚಿತರ ಒಡನೆ ಸುಜ್ಞಾನ ॥ ೨೪ ॥

ಲೋಕ ಮಾತೆಯು ಪಡೆದು ನೀ ಜಗದ-ಏಕ-ಪಾತ್ರನಿಗೆ-ಇತ್ತ ಕಾರಣ,
ಶ್ರೀ ಕುಮಾರಿ ಸಮೇತ ನೆಲಸಿದ ನಿನ್ನ ಮಂದಿರದಿ,
ಆ ಕಮಲ ಭವ ಮುಖರು ಬಿಡದೆ ಪರಾಕ್-ಎನುತ ನಿಂದಿಹರೊ,
ಗುಣ ರತ್ನಾಕರನೆ ಬಣ್ಣಿಸಲಳವೆ, ಕೊಡು ಎಮಗೆ ಸನ್ಮನವ ॥ ೨೫ ॥

ಪಣೆಯೊಳು ಒಪ್ಪುವ ತಿಲಕ, ತುಲಸೀ ಮಣಿ-ಗಣ-ಅನ್ವಿತ ಕಂಠ,
ಕರದಲಿ ಕ್ವಣಿತ ವೀಣಾ, ಸುಸ್ವರದಿ ಬಹು ತಾಳ ಗತಿಗಳಲಿ,
ಪ್ರಣವ ಪ್ರತಿಪಾದ್ಯನ ಗುಣಂಗಳ ಕುಣಿದು ಪಾಡುತ,
ಪರಮ ಸುಖ ಸಂದಣಿಯೊಳು ಆಡುವ ದೇವ ಋಷಿ ನಾರದರಿಗೆ ಅಭಿನಮಿಪೆ ॥ ೨೬ ॥

ಆ ಸರಸ್ವತಿ ತೀರದಲಿ ಬಿನ್ನೈಸಲು ಆ ಮುನಿಗಳ ನುಡಿಗೆ,
"ಜಡ ಜ ಆಸನ"-"ಮಹ-ಈಶ"-ಆಚ್ಯುತರ ಲೋಕಂಗಳಿಗೆ ಪೋಗಿ,
ತಾ ಸಕಲ ಗುಣಗಳ ವಿಚಾರಿಸಿ ಕೇಶವನೆ ಪರ-ದೈವವು ಎಂದು ಉಪದೇಶಿಸಿದ
ಭೃಗು ಮುನಿಪ ಕೊಡಲಿ ಎಮಗೆ ಅಖಿಳ ಪುರುಷ-ಅರ್ಥ ॥ ೨೭ ॥

ಬಿಸರುಹ ಅಂಬಕನ ಆಜ್ಞೆಯಲಿ ಸುಮನಸ ಮುಖನು ತಾನು ಎನಿಸಿ,
ನಾನಾ ರಸಗಳು ಉಳ್ಳ ಹರಿಸ್ಸುಗಳನು ಅವರ-ಅವರಿಗೆ ಒಯ್ದು ಈವ,
ವಸು ಕುಲ ಅಧಿಪ ಯಜ್ಞ ಪುರುಷನ, ಅಸಮ ಬಲ ರೂಪಂಗಳಿಗೆ ವಂದಿಸುವೆ,
ಜ್ಞಾನ ಯಶಸ್ಸು ವಿದ್ಯ ಸುಬುದ್ಧಿ ಕೊಡಲಿ ಎಮಗೆ ॥ ೨೮ ॥

ತಾತನ ಅಪ್ಪಣೆ ಯಿಂದ ನೀ ಪ್ರಖ್ಯಾತಿ-ಯುಳ್ಳ ಅರವತ್ತು ಮಕ್ಕಳ
ಪ್ರೀತಿ-ಯಿಂದಲಿ ಪಡೆದು, ಅವರ-ಅವರಿಗೆ ಇತ್ತು ಮನ್ನಿಸಿದೆ,
ವೀತಿ ಹೋತ್ರನ ಸಮಳು ಎನಿಸುವ ಪ್ರಸೂತಿ ಜನನಿ,
ತ್ವದ್-ಅಂಘ್ರಿ ಕಮಲಕೆ ನಾ ತುತಿಸಿ ತಲೆ ಬಾಗುವೆ, ಎಮ್ಮ ಕುಟುಂಬ ಸಲಹುವದು ॥ ೨೯ ॥

ಶತ ಧೃತಿಯ ಸುತರ ಈರ್ವರ ಉಳಿದ ಅಪ್ರತಿಮ ಸು-ತಪೋ ನಿಧಿಗಳ
ಪರಾಜಿತನ ಸು-ಸಮಾಧಿಯೊಳು ಇರಿಸಿ ಮೂರ್-ಲೋಕದೊಳು ಮೆರೆವ,
ವ್ರತಿ ವರ ಮರೀಚಿ-ಅತ್ರಿ-ಪುಲಹಾ-ಕ್ರತು-ವಸಿಷ್ಠ-ಪುಲಸ್ತ್ಯ-
ವೈವಸ್ವತನು-ವಿಶ್ವಾಮಿತ್ರ-"ಅಂಗಿರ"ರ ಅಂಘ್ರಿಗೆ ಎರಗುವೆನು ॥ ೩೦ ॥

ದ್ವಾದಶ ಆದಿತ್ಯರೊಳು ಮೊದಲಿಗನು ಆದ ಮಿತ್ರ,
ಪ್ರವಹ ಮಾನಿನಿ ಯಾದ ಪ್ರಾವಹಿ, ನಿರಋತಿ, ನಿರ್ಜರ ಗುರು ಮಹಿಳೆ ತಾರಾ,
ಈ ದಿವೌಕಸರು ಅನುದಿನ ಆಧಿ-ವ್ಯಾಧಿ ಉಪಟಳವ ಅಳಿದು,
ವಿಬುಧರಿಗೆ ಆದರದಿ ಕೊಡಲಿ ಅಖಿಳ ಮಂಗಳವ ಆವ ಕಾಲದಲಿ ॥ ೩೧ ॥

ಮಾನನಿಧಿಗಳು ಎನಿಸುವ ವಿಷ್ವಕ್ಸೇನ-"ಧನ ಪ"-ಗಜಾನನರಿಗೆ
ಸಮಾನರು "ಎಂಭತ್ತು ಐದು" ಶೇಷ ಶತಸ್ಥ ದೇವ ಗಣಕೆ ಆ ನಮಿಸುವೆನು,
ಬಿಡದೆ ಮಿಥ್ಯಾ-ಜ್ಞಾನ ಕಳೆದು, ಸುಬುದ್ಧಿ ನಿತ್ತು,
ಸದಾ-ಅನುರಾಗದಲಿ ಎಮ್ಮ ಪರಿಪಾಲಿಸಲಿ ಯೆಂದು ಎನುತ ॥ ೩೨ ॥

ಭೂತ ಮರುತನು ಅವಾಂತರ ಅಭಿಮಾನೀ, ತಪಸ್ವಿ ಮರೀಚಿ ಮುನಿ,
ಪುರುಹೂತ ನಂದನ, ಪಾದಮಾನಿ ಜಯಂತರು ಎಮಗೊಲಿದು,
ಕಾತರವ ಪುಟ್ಟಿಸದೆ ವಿಷಯದಿ, ವೀತ ಭಯನ ಪದ ಅಬ್ಜದಲಿ,
ವಿಪರೀತ ಬುದ್ಧಿಯನು ಈಯದೆ ಸದಾ ಪಾಲಿಸಲಿ ಯೆಮ್ಮ ॥ ೩೩ ॥

ಓದಿಸುವ ಗುರುಗಳನು ಜರಿದು, ಸಹ-ಓದುಗರಿಗೆ ಉಪದೇಶಿಸಿದ,
ಮಹದಾದಿ ಕಾರಣ ಸರ್ವ ಗುಣ ಸಂಪೂರ್ಣ ಹರಿಯು ಎಂದು ವಾದಿಸುವ,
ತತ್-ಪತಿಯ ತೋರು ಎಂದು ಆ ದನು-ಜ ಬೆಸಗೊಳಲು,
ಸ್ತಂಭದಿ ಶ್ರೀದನ ಆಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ ॥ ೩೪ ॥

ಬಲಿ ಮೊದಲು ಸಪ್ತ ಇಂದ್ರರು ಇವರಿಗೆ ಕಲಿತ ಕರ್ಮ-ಜ ದಿವಿಜರು ಎಂಬರು,
ಉಳಿದ ಏಕಾ-ದಶ ಮನುಗಳು, ಉಚಿತ್ಥ್ಯ ಚವನ ಮುಖ,
ಕುಲ ಋಷಿಗಳು ಎಂಭತ್ತು, ಹೈಹಯ-ಇಳಿಯ ಕಂಪನ ಗ್ಯೆದ ಪೃಥು-
ಮಂಗಳ ಪರಿಕ್ಷಿತ-ನಹುಷ-ನಾಭಿ-ಯಯಾತಿ-ಶಶಿ ಬಿಂದು ॥ ೩೫ ॥

ಶತಕ ಸಂಕೇತ ಉಳ್ಳ ಪ್ರಿಯ ವ್ರತ-ಭರತ-ಮಾಂಧಾತ ಪುಣ್ಯ ಆಶ್ರಿತರು,
ಜಯ-ವಿಜಯ ಆದಿಗಳು ಗಂಧರ್ವರು ಎಂಟು ಜನ,
ಹುತ ವಹ-ಜ ಪಾವಕ, ಸನಾತನ, ಪಿತೃಗಳು ಏಳ್ವರು, ಚಿತ್ರ ಗುಪ್ತರು,
ಪ್ರತಿದಿನದಿ ಪಾಲಿಸಲಿ ತಮ್ಮವನು ಎಂದು ಎಮಗೊಲಿದು ॥ ೩೬ ॥

ವಾಸವ ಆಲಯ ಶಿಲ್ಪ, ವಿಮಲ ಜಲ ಆಶಯಗಳೊಳು ರಮಿಪ ಊರ್ವಶಿ,
ಭೇಶ ರವಿಗಳ ರಿಪುಗಳು ಎನಿಸುವ ರಾಹು-ಕೇತುಗಳು,
ಶ್ರೀಶ ಪದ ಪಂಥಾನ ಧೂಮ ಅರ್ಚೀರ ದಿವಿಜರು,
ಕರ್ಮ-ಜ-ರಿಗೆ ಸದಾ ಸಮಾನ ದಿವೌಕಸರು ಕೊಡಲಿ ಎಮಗೆ ಮಂಗಳವ ॥ ೩೭ ॥

ದ್ಯು ನದಿ-ಶ್ಯಾಮಲ-ಸಂಜ್ಞ-ರೋಹಿಣಿ-"ಘನ ಪ" ಪರ್ಜನ್ಯ-ಅನಿರುದ್ಧನ ವನಿತೆ
ಬ್ರಹ್ಮ-ಅಂಡ-ಅಭಿಮಾನಿ ವಿರಾಟ ದೇವಿಯರ ನೆನೆವೆನು,
ಆ ನಲವಿಂದೆ ದೇವಾನನ ಮಹಿಳೆ ಸ್ವಾಹ ಆಖ್ಯರು
ಆಲೋಚನೆ ಕೊಡಲಿ ನಿರ್ವಿಘ್ನದಿಂ ಭಗವದ್-ಗುಣಂಗಳಲಿ ॥ ೩೮ ॥

ವಿಧಿ ಪಿತನ ಪಾದ ಅಂಬುಜ-ಗಳಿಗೆ ಮಧುಪನ-ಅಂತೆ ವಿರಾಜಿಪ-ಅಮಲ
ಉದಕಗಳಿಗೆ ಸದಾ-ಅಭಿಮಾನಿಯು ಯೆಂದೆನಿಸಿ-ಕೊಂಬ ಬುಧಗೆ ನಾ ವಂದಿಸುವೆ ಸರ್ವ್ಮೋದದಿ,
ನಿರಂತರವು ಒಲಿದು ಎಮಗೆ
ಅಭ್ಯುದಯ ಪಾಲಿಸಲಿ ಎಂದು ಪರಮ-ಉತ್ಸವದೊಳು ಅನುದಿನದಿ ॥ ೩೯ ॥

ಶ್ರೀ-ವಿರಂಚಿ ಆದ್ಯರ ಮನಕೆ ನಿಲುಕ ಆವ ಕಾಲಕೆ,
ಜನನ ರಹಿತನ ತಾವು ಒಲಿಸಿ ಮಗನು ಎಂದು ಮುದ್ದಿಸಿ ಲೀಲೆಗಳ ನೋಳ್ಪ,
ದೇವಕಿಗೆ ವಂದಿಪೆ-ಯಶೋದಾ ದೇವಿಗೆ ಆನಮಿಸುವೆನು,
ಪರಮ ಕೃಪ-ಅವಲೋಕನದಿಂದ ಸಲಹುವದು ಎಮ್ಮ ಸಂತತಿಯ ॥ ೪೦ ॥

ಪಾಮರರನ ಪವಿತ್ರ-ಗೈಸುವ ಶ್ರೀ ಮುಕುಂದನ ವಿಮಲ ಮಂಗಳ
ನಾಮಗಳಿಗೆ ಅಭಿಮಾನಿಯಾದ ಉಷ ಆಖ್ಯ ದೇವಿಯರು,
ಭೂಮಿಯೊಳಗೆ ಉಳ್ಳ ಅಖಿಳ ಸಜ್ಜನರ ಆಮಯ ಆದಿಗಳ ಅಳಿದು ಸಲಹಲಿ,
ಆ ಮರುತ್ವಾನ್ ಮನೆಯ ವೈದ್ಯರ ರಮಣಿ ಪ್ರತಿದಿನದಿ ॥ ೪೧ ॥

ಪುರುಟ ಲೋಚನ ನಿನ್ನ ಕದ್ದು-ಒಯಿದು-ಇರಲು ಪ್ರಾರ್ಥಿಸೆ,
ದೇವತೆಗಳ ಉತ್ತರವ ಲಾಲಿಸಿ ತಂದ ವರಾಹ ರೂಪ ತಾನು ಆಗಿ,
ಧರಣಿ ಜನನಿ ನಿನ್ನ ಪಾದಕ್ಕೆ ಎರಗಿ ಬಿನ್ನೈಸುವೆನು,
ಪಾದ-ಸ್ಪರುಶ ಮೊದಲಾದ ಅಖಿಳ ದೋಷಗಳು ಎಣಿಸದಿರು ಯೆಂದು ॥ ೪೨ ॥

ವನಧಿ ವಸನೆ, ವರ-ಅದ್ರಿ ನಿಚಯ, ಸ್ತನ ವಿರಾಜಿತೇ,
ಚೇತನ-ಅಚೇತನ ವಿಧಾರಕೆ, ಗಂಧ ರಸ ರೂಪಾದಿ ಗುಣ ವಪುಷೇ,
ಮುನಿಕುಲ-ಉತ್ತಮ ಕಶ್ಯಪನ ನಿಜ ತನು-ಜೆ, ನಿನಗೆ ಆನಮಿಪೆ,
ಎನ್ನ ಅವಗುಣಗಳು ಎಣಿಸದೆ ಪಾಲಿಪುದು ಪರಮ-ಆತ್ಮನ ಅರ್ಧಾಂಗಿ ॥ ೪೩ ॥

ಹರಿ ಗುರುಗಳ ಅರ್ಚಿಸದ ಪಾಪ-ಆತ್ಮರನ ಶಿಕ್ಷಿಸಲು ಓಸುಗ
ಶನೈಶ್ಚರನು ಎನಿಸಿ ದುಷ್-ಫಲಗಳು ಈವೆ ನಿರಂತರದಿ ಬಿಡದೆ,
ತರಣಿ ನಂದನ, ನಿನ್ನ ಪಾದ-ಅಂಬುರುಹಗಳಿಗೆ ಆ ನಮಿಪೆ,
ಬಹು ದುಸ್ತರ ಭವ-ಅರ್ಣದಿ ಮಗ್ನನು ಆದೆನ್ನ ಉದ್ಧರಿಸ ಬೇಕು ॥ ೪೪ ॥

ನಿರತಿಶಯ ಸುಜ್ಞಾನ ಪೂರ್ವಕ ವಿರಚಿಸುವ ನಿಷ್-ಕಾಮ ಕರ್ಮಗಳ ಅರಿತು
ತತ್-ತತ್-ಕಾಲದಲಿ ತಜ್ಜನ್ಯ ಫಲ ರಸವ ಹರಿಯ ನೇಮದಲಿ ಉಣಿಸಿ,
ಬಹು ಜೀವರಿಗೆ ಕರ್ಮಪನು ಎನಿಪ,
ಗುರು ಪುಷ್ಕರನು ಸತ್-ಕ್ರಿಯಂಗಳಲಿ ನಿರ್-ವಿಘ್ನತೆಯ ಕೊಡಲಿ ॥ ೪೫ ॥

ಶ್ರೀನಿವಾಸನ ಪರಮ ಕಾರುಣ್ಯಾನಿ-ವಾಸ-ಸ್ಥಾನರು ಎನಿಪ ಕೃಶಾನುಜರು
ಸಾಹಸ್ರ ಷೋಡಶ ಶತರು, ಶ್ರೀಕೃಷ್ಣ ಮಾನಿನಿಯರು ಎಪ್ಪತ್ತು,
ಯಕ್ಷರು-ದಾನವರು ಮೂವತ್ತು,
ಚಾರಣ ಅಜಾನಜ ಅಮರರು, ಅಪ್ಸರರು, ಗಂಧರ್ವರಿಗೆ ನಮಿಪೆ ॥ ೪೬ ॥

ಕಿನ್ನರರು-ಗುಹ್ಯಕರು-ರಾಕ್ಷಸ ಪನ್ನಗರು-ಪಿತೃಗಳು-ಸಿದ್ಧರು-।
ಸನ್ನುತ ಅಜಾನಜರು ಸಮರು, ಇವರು ಅಮರ ಯೋನಿಜರು,
ಇನ್ನಿವರ ಗಣವೆಂತು ಬಣ್ಣಿಸಲು ಎನ್ನೊಳವೆ,
ಕರುಣದಲಿ ಪರಮ-ಆಪನ್ನ ಜನರಿಗೆ ಕೊಡಲಿ ಸನ್ಮುದ ಪರಮ ಸ್ನೇಹದಲಿ ॥ ೪೭ ॥

ಆ ಯಮುನೆಯೊಳು ಸಾದರದಿ ಕಾತ್ಯಾಯನೀ ವ್ರತ ಧರಿಸಿ,
ಕೆಲರು ದಯಾ-ಯುಧನೆ ಪತಿ ಯೆಂದು, ಕೆಲವರು ಜಾರತನದಲ್ಲಿ
ವಾಯುಪಿತನ ಒಲಿಸಿದರು, ಈರ್ವಗೆ ತೋಯ-ಸರ-ಸರ,
ಪಾದ ಕಮಲಕೆ ನಾ ಯೆರಗುವೆ, ಮನೋರಥಂಗಳ ಸಲಿಸಲಿ ಅನುದಿನದಿ ॥ ೪೮ ॥

ನೂರು ಮುನಿಗಳ ಉಳಿದು ಮೇಲಣ ನೂರು ಕೋಟಿ ತಪೋಧನರ
ಪಾದ-ಅರವಿಂದಕೆ ಮುಗಿವೆ ಕರಗಳನು ಉದ್ಧರಿಸಲಿ ಎಂದು,
ಮೂರು ಸಪ್ತ ಶತ ಆಹ್ವಯರ ತೊರೆದು ಈ ಋಷಿಗಳ ಆನಂತರಲಿಹ
ಭೂರಿ ಪಿತೃಗಳು ಕೊಡಲಿ ಎಮಗೆ ಸಂತತ ಸುಮಂಗಳವ ॥ ೪೯ ॥

ಪಾವನಕೆ ಪಾವನನು ಎನಿಸುವ ರಮಾ-ವಿನೋದಿಯ ಗುಣ-ಗಣಂಗಳ,
ಸಾವಧಾನದಲಿ ಏಕ ಮಾನಸರು ಆಗಿ ಸುಸ್ವರದಿ
ಆ ವಿಬುಧಪತಿ ಸಭೆಯೊಳಗೆ ನಾನಾ ವಿಲಾಸದಿ ಪಾಡಿ ಸುಖಿಸುವ,
ದೇವ ಗಂಧರ್ವರು ಕೊಡಲಿ ಎಮಗೆ ಅಖಿಳ ಪುರುಷ-ಅರ್ಥ ॥ ೫೦ ॥

ಭುವನ ಪಾವನ ಮಾಳ್ಪ ಲಕ್ಷ್ಮೀ ಧವನ
ಮಂಗಳ ದಿವ್ಯ ನಾಮ ಸ್ತವನ-ಗೈವ ಮನುಷ್ಯ ಗಂಧರ್ವರಿಗೆ ವಂದಿಸುವೆ,
ಪ್ರವರ ಭೂ-ಭುಜರ ಉಳಿದು ಮಧ್ಯಮ ಕುವಲಯಪರು ಎಂದು ಎನಿಸಿಕೊಂಬರ,
ದಿವಸ ದಿವಸಂಗಳಲಿ ನೆನೆವೆನು ಕರಣ ಶುದ್ಧಿಯಲಿ ॥ ೫೧ ॥

ಶ್ರೀ-ಮುಕುಂದನ ಮೂರ್ತಿಸಲೆ ಸೌದಾಮಿನಿಯವೋಲ್ ಹೃದಯ ವಾರಿಜ
ವ್ಯೋಮ ಮಂಡಲ ಮಧ್ಯದಲಿ ಕಾಣುತಲಿ ಮೋದಿಸುವ,
ಆ ಮನುಷ್ಯ-ಉತ್ತಮರ ಪದ ಯುಗ ತಾಮರಸಗಳಿಗೆ ಎರಗುವೆ,
ಸದಾ ಕಾಮಿತ-ಅರ್ಥಗಳ ಇತ್ತು ಸಲಹಲಿ ಪ್ರಣತ ಜನ-ತತಿಯ ॥ ೫೨ ॥

ಈ ಮಹೀ ಮಂಡಲ-ದೊಳಿಹ ಗುರು ಶ್ರೀಮದ್-ಆಚಾರ್ಯರ ಮತಾನುಗರು
ಆ ಮಹಾ ವೈಷ್ಣವರ ವಿಷ್ಣು ಪದ-ಅಬ್ಜ ಮಧುಕರರ ಸ್ತೋಮಕೆ ಆನಮಿಸುವೆನು,
ಅವರವರ ನಾಮಗಳನು ಏಂ ಪೇಳ್ವೆ ಬಹುವಿಧ,
ಯಾಮ ಯಾಮಂಗಳಲಿ ಬೋಧಿಸಲಿ ಎಮಗೆ ಸನ್ಮತಿಯ ॥ ೫೩ ॥

ಮಾರನಯ್ಯನ ಕರುಣ ಪಾರಾವಾರ ಮುಖ್ಯ ಸುಪಾತ್ರರು ಎನಿಪ,
"ಸರೋರುಹ ಆಸನ"-ವಾಣಿ-ರುದ್ರ-ಇಂದ್ರ ಆದಿ ಸುರನಿಕರ,
ತಾರತಮ್ಯ-ಆತ್ಮಕ ಸು-ಪದ್ಯಗಳ ಆರು ಪಠಿಸುವರು ಆ ಜನರಿಗೆ,
ರಮಾ-ರಮಣ ಪೂರೈಸಲಿ ಈಪ್ಸಿತ ಸರ್ವ ಕಾಲದಲಿ ॥ ೫೪ ॥

ಮೂರು ಕಾಲಗಳಲ್ಲಿ ತುತಿಸೆ ಶರೀರ ವಾಙ್-ಮನ: ಶುದ್ಧಿ ಮಾಳ್ಪುದು,
ದೂರ-ಗೈಸುವದು ಅಖಿಳ ಪಾಪ ಸಮೂಹ ಪ್ರತಿದಿನದಿ,
ಚೋರ ಭಯ-ರಾಜ ಭಯ-ನಕ್ರ-ಚಮೂರ-ಶಸ್ತ್ರ-ಜಲ-ಅಗ್ನಿ-ಭೂತ-
ಮಹೋರಗ-ಜ್ವರ-ನರಕ ಭಯ ಸಂಭವಿಸದು ಎಂದೆಂದು ॥ ೫೫ ॥

ಜಯ ಜಯತು ತ್ರಿ-ಜಗದ್-ವಿಲಕ್ಷಣ, ಜಯ ಜಯತು ಜಗದ-ಏಕ ಕಾರಣ,
ಜಯ ಜಯತು ಜಾನಕೀ ರಮಣ, ನಿರ್ಗತ ಜರಾ-ಮರಣ,
ಜಯ ಜಯತು ಜಾಹ್ನವೀ ಜನಕ, ಜಯ ಜಯತು ದೈತ್ಯ ಕುಲ-ಅಂತಕ,
ಭವಾ-ಮಯ-ಹರ, ಜಗನ್ನಾಥ ವಿಠಲ, ಪಾಹಿಮಾಂ ಸತತ ॥ ೫೬ ॥

॥ ಇತಿ ಶ್ರೀ ಕಕ್ಷಾತಾರತಮ್ಯ ಸಂಧಿ ಸಂಪೂರ್ಣಂ ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ: ॥

॥ ಇತಿ ಶ್ರೀ ಫಲಶ್ರುತಿ ಸಂಧಿ ॥

ಶ್ರೀಜಗನ್ನಾಥ ದಾಸಾರ್ಯರ ಪರಮ ಮುಖ್ಯ ಶಿಷ್ಯರಾದ
ಶ್ರೀ ಶ್ರೀದವಿಠಲರು (ಶ್ರೀ ಕರ್ಜಿಗಿ ದಾಸಪ್ಪದಾಸರು) ರಚಿಸಿದ
ಶ್ರೀಮದ್ಧರಿಕಥಾಮೃತಸಾರದ ಫಲಸ್ತುತಿ ಸಂಧಿ

ಹರಿಕಥಾಮೃತಸಾರ ಗುರುಗಳ ।
ಕರುಣದಿಂದಾಪನಿತು ಪೇಳುವೆ ॥
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥

ಹರಿಕಥಾಮೃತಸಾರ ಶ್ರೀಮ ।
ದ್ಗುರುವರ ಜಗನ್ನಾಥ ದಾಸರ ।
ಕರತಳಾಮಲಕವೆನೆ ಪೇಳಿದ ಸಕಲ ಸಂಧಿಗಳ ॥
ಪರಮ ಪಂಡಿತ ಮಾನಿಗಳು ಮ ।
ತ್ಸರಿಸಲೆದೆಗಿಚ್ಚಾಗಿ ತೋರುವು ।
ದರಸಿಕರಿಗಿದು ತೋರಿ ಪೇಳುವದಲ್ಲ ಧರೆಯೊಳಗೆ ॥ ೧ ॥

ಭಾಮಿನೀ ಷಟ್ಪದಿಯ ರೂಪದ ।
ಲೀಮಹಾದ್ಭುತ ಕಾವ್ಯದಾದಿಯೊ ।
ಳಾ ಮನೋಹರ ತರ ತರಾತ್ಮಕ ನಾಂದಿ ಪದ್ಯಗಳ ॥
ಯಾಮಯಾಮಕೆ ಪಠಿಸುವವರ ಸು ।
ಧಾಮಸಖ ಕೈಪಿಡಿಯಲೋಸುಗ ।
ಪ್ರೇಮದಿಂದಲಿ ಪೇಳ್ದ ಗುರು ಕಾರುಣ್ಯಕೇನೆಂಬೆ ॥ ೨ ॥

ಸಾರವೆಂದರೆ ಹರಿಕಥಾಮೃತ ।
ಸಾರವೆಂಬುವುದೆಮ್ಮ ಗುರುವರ ।
ಸಾರಿದಲ್ಲದೆ ತಿಳಿಯದೆನುತ ಮಹೇಂದ್ರ ನಂದನನ ॥
ಸಾರಥಿಯ ಬಲಗೊಂಡು ಸಾರಾ ।
ಸಾರಗಳ ನಿರ್ಣೈಸಿ ಪೇಳ್ದನು ।
ಸಾರ ನಡೆವ ಮಹಾತ್ಮರಿಗೆ ಸಂಸಾರ ವೆಲ್ಲಿಹದೊ ॥ ೩ ॥

ದಾಸವರ್ಯರ ಮುಖದಿ ನಿಂದು ರ ।
ಮೇಶನನು ಕೀರ್ತಿಸುವ ಮನದಭಿ ।
ಲಾಷೆಯಲಿ ವರ್ಣಾಭಿಮಾನಿಗಳೊಲಿದು ಪೇಳಿಸಿದ ॥
ಈ ಸುಲಕ್ಷಣ ಕಾವ್ಯದೊಳಗ್ಯತಿ ।
ಪ್ರಾಸಗಳಿಗೆ ಪ್ರಯತ್ನವಿಲ್ಲದೆ ।
ಲೇಸುಲೇಸನೆ ಶ್ರಾವ್ಯ ಮಾದುದೆ ಕುರುಹು ಕವಿಗಳಿಗೆ ॥ ೪ ॥

ಪ್ರಾಕೃತೋಕ್ತಿಗಳೆಂದು ಬರಿದೆ ಮ ।
ಹಾಕೃತಘ್ನರು ಜರಿವರಲ್ಲದೆ ।
ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು ॥
ಶ್ರೀಕೃತೀಪತಿ ಅಮಲ ಗುಣಗಳು ।
ಈ ಕೃತಿಯೊಳುಂಟಾದ ಬಳಿಕ ।
ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಜನರಿಗೆ ॥ ೫ ॥

ಶ್ರುತಿಗೆ ಶೋಭನವಾಗದಡೆ ಜಡ ।
ಮತಿಗೆ ಮಂಗಳ ವೀಯದಡೆ ಶ್ರುತಿ ।
ಸ್ಮೃತಿಗೆ ಸಮ್ಮತವಾಗದಿದ್ದಡೆ ನಮ್ಮ ಗುರುರಾಯ ॥
ಮಥಿಸಿ ಮಧ್ವಾಗಮ ಪಯೋಬ್ಧಿಯ ।
ಕ್ಷಿತಿಗೆ ತೋರಿದ ಬ್ರಹ್ಮ ವಿದ್ಯಾ ।
ರತರಿಗೀಪ್ಸಿತ ಹರಿಕಥಾಮೃತಸಾರ ವೆನಿಸುವದು ॥ ೬ ॥

ಭಕ್ತಿವಾದದಿ ಪೇಳ್ದನೆಂಬ ಪ್ರ ।
ಸಕ್ತಿ ಸಲ್ಲದು ಕಾವ್ಯದೊಳು ಪುನ ।
ರುಕ್ತಿ ಶುಷ್ಕ ಸಮಾನ ಪದ ವ್ಯತ್ಯಾಸ ವೊದಲಾದ ॥
ಯುಕ್ತಿ ಶಾಸ್ತ್ರ ವಿರುದ್ಧ ಶಬ್ದ ವಿ ।
ಭಕ್ತಿ ವಿಷಮಗಳಿರಲು ಜೀವ ।
ನ್ಮುಕ್ತ ಭೋಗ್ಯವಿದೆಂದು ಸಿರಿಮದನಂದ ಮೆಚ್ಚುವನೆ? ॥ ೭ ॥

ಆಶು ಕವಿಕುಲ ಕಲ್ಪತರು ದಿ ।
ಗ್ದೇಶ ವರಿಯಲು ರಂಗನೊಲಮೆಯ ।
ದಾಸಕೂಟಸ್ಥರಿಗೆರಗಿ ನಾ ಬೇಡಿ ಕೊಂಬುವೆನು ॥
ಈ ಸುಲಕ್ಷಣ ಹರಿಕಥಾಮೃತ ।
ಮೀಸಲರಿಯದೆ ಸಾರ ದೀರ್ಘ ।
ದ್ವೇಷಿಗಳಿಗೆರೆಯದಲೆ ಸಲಿಸುವದೆನ್ನ ಬಿನ್ನಪವ ॥ ೮ ॥

ಪ್ರಾಸಗಳ ಪೊಂದಿಸದೆ ಶಬ್ದ ।
ಶ್ಲೇಷಗಳ ಶೋಧಿಸದೆ ದೀರ್ಘ ।
ಹ್ರಾಸಗಳ ಸಲ್ಲಿಸದೆ ಷಟ್ಪದಿಗತಿಗೆ ನಿಲ್ಲಿಸದೆ ॥
ದೂಷಕರು ದಿನದಿನದಿ ಮಾಡುವ ।
ದೂಷಣೆಯೆ ಭೂಷಣಗಳೆಂದುಪ ।
ದೇಶಗಮ್ಯವು ಹರಿಕಥಾಮೃತಸಾರ ಸಾಧ್ಯರಿಗೆ ॥ ೯ ॥

ಅಶ್ರುತಾಗಮ ಇದರ ಭಾವ ಪ ।
ರಿಶ್ರಮವು ಬಲ್ಲವರಿಗಾನಂ ।
ದಾಶ್ರುಗಳ ಮಳೆಗರೆಸಿ ಮರೆಸುವ ಚಮತ್ಕೃತಿಯ ॥
ಮಿಶ್ರರಿಗೆ ಮರೆ ಮಾಡಿ ದಿವಿಜರ ।
ಜಸ್ರದಲಿ ಕಾಯ್ದಿಪ್ಪರಿದರೊಳು ।
ಪ:ಶ್ರುತಿಗಳೈತಪ್ಪವೇ ನಿಜ ಭಕ್ತಿ ಉಳ್ಳವರಿಗೆ ॥ ೧೦ ॥

ನಿಚ್ಚ ನಿಜಜನ ನೆಚ್ಚ ನೆಲೆಗೊಂ ।
ಡಚ್ಚ ಭಾಗ್ಯವು ಪೆಚ್ಚ ಪೇರ್ಮೆಯು ।
ಕೆಚ್ಚ ಕೆಳ್ವನು ಮೆಚ್ಚ ಮಲಮರ ಮುಚ್ಚಲೆಂದೆನುತ ॥
ಉಚ್ಚವಿಗಳಿಗೆ ಪೊಚ್ಚ ಪೊಸದೆನ ।
ಲುಚ್ಚರಿಸಿದೀ ಸಚ್ಚರಿತ್ರೆಯ ।
ನುಚ್ಚರಿಸೆ ಸಿರಿವತ್ಸಲಾಂಛನ ಮೆಚ್ಚಲೇನರಿದು ॥ ೧೧ ॥

ಸಾಧು ಸಭೆಯೊಳು ಮೆರೆಯೆ ತತ್ವ ಸು ।
ಬೋಧ ವೃಷ್ಟಿಯಗರೆಯೆ ಕಾಮ ।
ಕ್ರೋಧ ಬೀಜವು ಹುರಿಯೆ ಖಳರೆದೆ ಬಿರಿಯೆ ಕರಕರಿಯ ॥
ವಾದಿಗಳ ಪಲ್ಮುರಿಯೆ ಪರಮ ವಿ ।
ನೋದಿಗಳ ಮೈಮರೆಯಲೋಸುಗ ।
ಹಾದಿತೋರಿದ ಹಿರಿಯ ಬಹುಚಾತುರ್ಯ ಹೊಸಪರಿಯ ॥ ೧೨ ॥

ವ್ಯಾಸ ತೀರ್ಥರೊಲೆವೆಯೋ ವಿಠಲೋ ।
ಪಾಸಕ ಪ್ರಭುವರ್ಯ ಪುರಂದರ ।
ದಾಸರಾಯರ ದಯವೋ ತಿಳಿಯದು ಓದಿ ಕೇಳದಲೆ ॥
ಕೇಶವನ ಗುಣಮಣಿಗಳನು ಪ್ರಾ ।
ಣೇಶಗರ್ಪಿಸಿ ವಾದಿರಾಜರ ।
ಕೋಶಕೊಪ್ಪುವ ಹರಿಕಥಾಮೃತಸಾರ ಪೇಳಿದರು ॥ ೧೩ ॥

ಹರಿಕಥಾಮೃತಸಾರ ನವರಸ ।
ಭರಿತ ಬಹು ಗಂಭೀರ ರತ್ನಾ ।
ಕರ ರುಚಿರ ಶೃಂಗಾರ ಸಾಲಂಕಾರ ವಿಸ್ತಾರ ॥
ಸರಸ ನರ ಕಂಠೀರವಾಖ್ಯಾ ।
ರ್ಯರ ಜನಿತ ಸುಕುಮಾರ ಸಾತ್ವೀ ।
ಕರಿಗೆ ಪರಮೋದಾರ ಮಾಡಿದ ಮರೆಯದುಪಕಾರ ॥ ೧೪ ॥

ಅವನಿಯೊಳು ಜ್ಯೋತಿಷ್ಮತೀ ತೈ ।
ಲವನು ಪಾಮರನುಂಡು ಜೀರ್ಣಿಸ ।
ಲವನೆ ಪಂಡಿತನೋಕರಿಪವಿವೇಕಿಯಪ್ಪಂತೆ ॥
ಶ್ರವಣ ಮಂಗಳ ಹರಿಕಥಾಮೃತ ।
ಸವಿದು ನಿರ್ಗುಣಸಾರ ಮಕ್ಕಿಸ ।
ಲವ ನಿಪುಣನೈ ಯೋಗ್ಯಗಲ್ಲದೆ ದಕ್ಕಲರಿಯದಿದು ॥ ೧೫ ॥

ಅಕ್ಕರದೊಳೀ ಕಾವ್ಯದೊಳೊಂ ।
ದಕ್ಕರವ ಬರೆದೋದಿದವ ದೇ ।
ವರ್ಕಳಿಂ ದುಸ್ತ್ಯಜ್ಯನೆನಿಸಿ ಧರ್ಮಾರ್ಥಕಾಮಗಳ ॥
ಲೆಕ್ಕಿಸದೆ ಲೋಕೈಕನಾಥನ ।
ಭಕ್ತಿ ಭಾಗ್ಯವ ಪಡೆವ ಜೀವ ।
ನ್ಮುಕ್ತಗಲ್ಲದೆ ಹರಿಕಥಾಮೃತಸಾರ ಸೊಗಸುವದೆ ॥ ೧೬ ॥

ವತ್ತಿಬಹ ವಿಘ್ನಗಳ ತಡೆದಪ ।
ಮೃತ್ಯುವಿಗೆ ಮರೆಮಾಡಿ ಕಾಲನ ।
ಭೃತ್ಯರಿಗೆ ಭೀಕರವ ಪುಟ್ಟಿಸಿ ಸಕಲ ಸಿದ್ಧಿಗಳ ॥
ಎತ್ತಿಗೊಳ್ಳಿಸಿ ವನರುಹೇಕ್ಷಣ ।
ನೃತ್ಯಮಾಡುವನವನ ಮನೆಯೊಳು ।
ನಿತ್ಯಮಂಗಳ ಹರಿಕಥಾಮೃತಸಾರ ಪಠಿಸುವರ ॥ ೧೭ ॥

ಆಯುರಾರೋಗ್ಯೈಶ್ವರಿಯ ಮಾ ।
ಹಾಯಶೋ ಧೈರ್ಯ ಬಲ ಸಮು ಸ ।
ಹಾಯ ಶೌರ್ಯೋದಾರ್ಯ ಗುಣಗಾಂಭೀರ್ಯ ಮೊದಲಾದ ॥
ಆಯುತಗಳುಂಟಾಗಲೊಂದ ।
ಧ್ಯಾಯ ಪಠಿಸಿದ ಮಾತ್ರದಿಂ ಶ್ರವ ।
ಣೀಯ ವಲ್ಲದೆ ಹರಿಕಥಾಮೃತಸಾರ ಸುಜನರಿಗೆ ॥ ೧೮ ॥

ಕುರುಡ ಕಂಗಳ ಪಡೆವ ಬಧಿರನಿ ।
ಗೆರಡು ಕಿವಿ ಕೇಳ್ಬಹವು ಬೆಳಯುದ ।
ಮುರುಡ ಮದನಾಕೃತಿಯ ತಾಳ್ವನು ಕೇಳ್ದ ಮಾತ್ರದಲಿ ॥
ಬರಡು ಹೈನಾಗುವದು ಪೇಳ್ದರೆ ।
ಕೊರಡು ಪಲ್ಲೈಸುವದು ಪ್ರತಿ ದಿನ ।
ಹುರುಡಿಲಾದರು ಹರಿಕಥಾಮೃತಸಾರವನು ಪಠಿಸೆ ॥ ೧೯ ॥

ನಿರ್ಜರ ತರಂಗಿಣಿಯೊಳನುದಿನ ।
ಮಜ್ಜನಾದಿ ಸಮಸ್ತ ಕರ್ಮ ವಿ ।
ವರ್ಜಿತಾಶಾಪಾಶದಿಂದಲಿ ಮಾಡಿದಧಿಕ ಫಲ ॥
ಹೆಜ್ಜೆ ಹೆಜ್ಜೆಗೆ ದೊರೆಯದಿಪ್ಪವೆ ।
ಸಜ್ಜನರು ಶಿರತೂಗುವಂದದಿ ।
ಘರ್ಜಿಸುತಲೀ ಹರಿಕಥಾಮೃತಸಾರ ಪಠಿಸುವರ ॥ ೨೦ ॥

ಸತಿಯರಿಗೆ ಪತಿಭಕುತಿ ಪತ್ನೀ ।
ವ್ರತ ಪುರುಷರಿಗೆ ಹರುಷ ನೆಲೆಗೊಂ ।
ಡತಿ ಮನೋಹರರಾಗಿ ಗುರು ಹಿರಿಯರಿಗೆ ಜಗದೊಳಗೆ ॥
ಸತತ ಮಂಗಳವೀವ ಬಹು ಸು ।
ಕೃತಿಗಳೆನಿಸುತ ಸುಲಭದಿಂ ಸ ।
ದ್ಗತಿಯ ಪಡೆವರು ಹರಿಕಥಾಮೃತಸಾರವನು ಪಠಿಸೆ ॥ ೨೧ ॥

ಎಂತು ಬಣ್ಣಿಸಲೆನ್ನಳವೆ ಭಗ ।
ವಂತನಮಲ ಗುಣಾನುವಾದಗ ।
ಳೆಂತು ಪರಿಯಲಿ ಪೂರ್ಣಬೋಧರ ಮತವ ಪೊಂದಿದರ ॥
ಚಿಂತನಗೆ ಬಪ್ಪಂತೆ ಬಹು ದೃ ।
ಷ್ಟಾಂತ ಪೂರ್ವಕವಾಗಿ ಪೇಳ್ದ ಮ ।
ಹಂತರಿಗೆ ನರರೆಂದು ಬಗೆವರೆ ನಿರಯ ಭಾಗಿಗಳು ॥ ೨೨ ॥

ಮಣಿಖಚಿತ ಹರಿವಾಣದೊಳು ವಾ ।
ರಣ ಸುಭೋಜ್ಯ ಪದಾರ್ಥ ಕೃಷ್ಣಾ ।
ರ್ಪಣವೆನುತ ಪಸಿದವರಿಗೋಸುಗ ನೀಡುವಂದದಲಿ ॥
ಪ್ರಣತರಿಗೆ ಪೊಂಗನಡ ವರ ವಾ ।
ಙ್ಮಣಿಗಳಿಂ ವಿರಚಿಸಿದ ಕೃತಿಯೊ ।
ಳುಣಿಸಿ ನೋಡುವ ಹರಿಕಥಾಮೃತಸಾರ ವನುದಾರ ॥ ೨೩ ॥

ದುಷ್ಟರೆನ್ನದೆ ದುರ್ವಿಷಯದಿಂ ।
ಪುಷ್ಟರೆನ್ನದೆ ಪೂತಕರ್ಮಾ ।
ಭ್ರಷ್ಟರೆನ್ನದೆ ಶ್ರೀದವಿಠಲ ವೇಣುಗೋಪಾಲ ॥
ಕೃಷ್ಣ ಕೈಪಿಡಿವನು ಸುಸತ್ಯ ವಿ ।
ಶಿಷ್ಟ ದಾಸತ್ವವನು ಪಾಲಿಸಿ ।
ನಿಷ್ಠೆ ಇಂದಲಿ ಹರಿಕಥಾಮೃತಸಾರ ಪಠಿಸುವರ ॥ ೨೪ ॥

॥ ಇತಿ ಶ್ರೀ ಕರ್ಜಗಿ ದಾಸರಾಯ ವಿರಚಿತ ಫಲಶ್ರುತಿ ಸಂಧಿ ಸಂಪೂರ್ಣಂ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥